# ಸಿದ್ಧಗಂಗಾ

ಟ-28. ಸಂಚಿಕೆ-12. ಡಿಸೆಂಬರ್-1992.



ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಶ್ರೀ ಶ್ರೀಗಳವರು ಬೆಂಗಳೂರಿನಲ್ಲಿ ಹೆಸರಾಂತ ಗುಬ್ಬಿ ವೀರಣ್ಣ ನಾಟಕ ಮಂಡಲಿಯ ಶತಮಾನೋತ್ಸವವನ್ನು ಜ್ಯೋತಿ ಬೆಳಗಿಸುವ ಮೂಲಕ -1992) ಉದ್ಘಾಟಿಸಿದರು. ಪದ್ಮಭೂಷಣ ನಟಸಾರ್ವಭೌಮ ಡಾ. ಶ್ರೀ ರಾಜಕುಮಾರ್ ಮತ್ತು ಮಾಜಿ ಮುಖ್ಯಮಂತ್ರಿ ಶ್ರೀ ಎಸ್. ಬಂಗಾರಪ್ಪ ಚಿತ್ರದಲ್ಲಿದ್ದಾರೆ.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ
**ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ**

# " ವಜ್ರಮಹೋತ್ಸವ ನಿಧಿ ಸಮಿತಿ ".

" ಶಿವಪಥವನರಿವಡೆ ಗುರುಪಥವೇ ಮೊದಲು "

ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ
60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ
ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

**ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :**

**4 ಕೋಟಿ ರೂಗಳ ವೆಚ್ಚದಲ್ಲಿ**
**ಬೃಹತ್ ವಿದ್ಯಾರ್ಥಿ ವಸತಿ ನಿಲಯ**
**ಮತ್ತು**
**ಬೃಹತ್ ಪ್ರಸಾದ ನಿಲಯ.**
(16-2-92) ರಂದು

ಭಾರತದ ಹಾಲಿರಾಷ್ಟ್ರಪತಿ ಡಾ|| ಶ್ರೀ ಶಂಕರದಯಾಳ ಶರ್ಮ ಮತ್ತು ಲೋಕಸಭಾಧ್ಯಕ್ಷ ಶ್ರೀ ಶಿವರಾಜ್ ಪಾಟೀಲ್ ಇವುಗಳ ಶಿಲಾನ್ಯಾಸವನ್ನು ನೆರವೇರಿಸಿದ್ದಾರೆ.

5/–, 10/–, 25/-, 51/-, 101/–, 201/-, 501/–, 1001/ 5001/-, 10,001/–, 35,000 ರೂ.ಗಳ ಕೂಪನ್‌ಗಳು ನಿಧಿ ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

ಬಿ. ಎಸ್. ಮುದ್ದಪ್ಪ, ಐ.ಎ.ಎಸ್,
ಕಾರ್ಯಾಧ್ಯಕ್ಷರು,

ಎಸ್. ಎಸ್. ಹಸಬಿ,
ಕಾರ್ಯದರ್ಶಿಗಳು.

ಪದ್ಮಭೂಷಣ ಡಾ|| ಎಂ. ಸಿ. ಮೋದಿ,
ಅಧ್ಯಕ್ಷರು,
ವಜ್ರಮಹೋತ್ಸವ ಸಮಿತಿ.
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104.

# ಸಿದ್ಧಗಂಗಾ

ಸಂಪುಟ-28. ಸಂಚಿಕೆ-12. ಡಿಸೆಂಬರ್-1992.

## ಶ್ರೀ ಸಿದ್ಧಗಂಗಾ ಗುರುಕರುಣ ಶ್ರೀವಿಧಿ.

ಕೇಳಬಾರದ ಭಕ್ತಿ ಹೇಳಬಾರದ ನಿಷ್ಠೆ
ತಾಳಬಾರದ ಲಿಂಗ ನೆಲೆಗೊಳಿಸಿ। ಸಲಹಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಇಷ್ಟಲಿಂಗದ ಕಳೆಯ ಕಷ್ಟವಿಲ್ಲದೆ ತೋರಿ
ಸೃಷ್ಟಿ ಸೋಜಿಗವಾಗಿ ನೆಲೆಗೊಳಿಸಿ। ಸಲಹಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಆರು ಚಕ್ರಗಳಲ್ಲಿ ಆರು ತೆರಲಿಂಗವನು
ಆರು ಕಾಣದರೀತಿ ಇರಿಸಿದೆ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

‡‡ + ‡‡ ÷ ‡‡

—ಹೆಚ್. ವಿ. ವೀರಭದ್ರಯ್ಯ.

# ಶ್ರೀವಾಣಿ

**ಆತ್ಮಸಾಧನೆ:—**

ಇಂದು ಮಠಾಧಿಪತಿಗಳು ಬಹುವಾಗಿ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸುವ ಮೂಲಕ ಸಮಾಜ ಸೇವೆಯಲ್ಲಿ ನಿರತರಾಗಿರುವುದು ಕಾಣಬರುತ್ತಿದೆ. ಒಂದು ಚಿಕ್ಕ ಮಠವಾಗಿದ್ದರೂ ತನ್ನ ಇತಿಮಿತಿಯಲ್ಲಿ ಒಂದು ಶಾಲೆಯನ್ನು ನೆಡೆಸುತ್ತಿರುವುದು ಸರ್ವವೇದ್ಯ. ಶಿಕ್ಷಣ ಪ್ರಸಾರ ಕಾರ್ಯದಲ್ಲಿ ಮಠಗಳಪಾತ್ರ ತುಂಬ ಗಣನೀಯವಾದುದು ಸಂತೋಷ ಪಡಬೇಕಾದ ವಿಚಾರ. ಒಂದು ಕಾಲವಿತ್ತು ಜನಾಂಗ ಅನಕ್ಷರಸ್ಥರಾಗಿದ್ದು, ಸಮಾಜದ ಎಲ್ಲ ವರ್ಗದವರಿಗೂ ಶಿಕ್ಷಣಾವಕಾಶ ದುರ್ಲಭವಾಗಿದ್ದ ಸಮಯದಲ್ಲಿ ಮಠಗಳು ಮುಂದೆ ಬಂದವು, ಕಾರ್ಯಶೀಲವಾದವು, ಗಮನಾರ್ಹ ಸೇವೆಸಲ್ಲಿಸಿದವು. ಪೂರ್ವ ಪ್ರಾಥಮಿಕ ಶಾಲೆಯಿಂದ ಮೊದಲುಗೊಂಡು ಪ್ರಥಮದರ್ಜೆ ಕಾಲೇಜು, ವೃತ್ತಿ ವಿಜ್ಞಾನ ಕಾಲೇಜು, ತಾಂತ್ರಿಕ ಕಾಲೇಜು ವೈದ್ಯಕೀಯ ಕಾಲೇಜುಗಳ ಜೊತೆಗೆ ಸಂಸ್ಕೃತ ಕಾಲೇಜುಗಳನ್ನು ತೆರೆದು ಮಹೋದೋಪಕಾರಮಾಡಿದವು. ಸಂಸ್ಥೆಗಳ ಅಧಿಪತಿಗಳಾಗಿದ್ದ ಸ್ವಾಮಿಗಳು ಶಿಕ್ಷಣ ಪ್ರಸಾರ ತಮ್ಮ ಆತ್ಯಂತಿಕ ಗುರಿಯೆಂದೇ ಸೇವೆಗೈಯುತ್ತ ಬಂದರು. ಸ್ಪರ್ಧಾತ್ಮಕವಾಗಿ ದುಡಿದದ್ದು ಉಂಟು. ಸಮಾಜ ಸೇವೆಯೇ ಶಿವಪೂಜೆ ಎಂದು ನಂಬಿ ನಡೆದರು. ನಡೆಯಬೇಕಾದ ಅಗತ್ಯವೂ ಇತ್ತು. ಆದರೆ ಇಂದು ಎಲ್ಲೆಲ್ಲೂ ಶಿಕ್ಷಣ ಸಂಸ್ಥೆಗಳು ಖಾಸಗಿಯವರ ಒಡೆತನದಲ್ಲಿ ತಲೆಎತ್ತಿವೆ. ಅಲ್ಲೆಲ್ಲಾ ನಿರೀಕ್ಷಿಸಿದ ಶಿಕ್ಷಣ ಮಟ್ಟ ಲಭ್ಯವಾಗುತ್ತಿದೆ ಎನ್ನಲು ಬರುವಂತಿಲ್ಲ. ಶಿಕ್ಷಣ ಸಂಸ್ಥೆಗಳು ವ್ಯಾಪಾರ ಮಳಿಗೆಗಳಾಗುತ್ತಿವೆ ಎಂಬ ಆರೋಪವನ್ನು ಹೊರುವಂತಹ ಸನ್ನಿವೇಶ ಪ್ರಾಪ್ತವಾಗಿದೆ. ಮಠಾಧಿಪತಿಗಳು ಸಂಸ್ಥೆಗಳನ್ನು ಪ್ರಾರಂಭಿಸಿದ್ದಕ್ಕಾಗಿ ನಡೆಸಲೇಬೇಕಾಗಿದೆ. ಹಿಂದೆ ಮಠಮಾನ್ಯಗಳು ನಡೆಸುತ್ತಿದ್ದ ಸಂಸ್ಥೆಗಳನ್ನು ಪವಿತ್ರ ದೃಷ್ಟಿಯಿಂದ ನೋಡುತ್ತಿದ್ದರು. ಅಧಿಕಾರಿಗಳು ಉದಾರವಾಗಿ ಸಹಕರಿಸುತ್ತಿದ್ದರು. ಸಾರ್ವಜನಿಕರು ಪ್ರೀತಿ ವಿಶ್ವಾಸಗಳಿಂದ ಕಾಣುತ್ತಿದ್ದರು. ಇಂದು ಎಲ್ಲ ಬದಲಾಗಿದೆ ಎಂಬ ಕಟುಸತ್ಯವನ್ನು ಅನಿವಾರ್ಯವಾಗಿ ಹೇಳಲೇಬೇಕಾಗಿದೆ. ಇಷ್ಟೆಲ್ಲ ಆದರೂ ಮಠಾಧಿಪತಿಗಳು ಸಾಧಿಸಿದ್ದೇನು ? ಎಂಬ ಪ್ರಶ್ನೆ ಎದುರಾಗುತ್ತದೆ. ಅವರೆಷ್ಟು ಶಿಕ್ಷಣಸಂಸ್ಥೆ ತೆರೆದಿದ್ದಾರೆ, ಇವರೆಷ್ಟು ತೆರೆದಿದ್ದಾರೆ ಎಂಬ ಲೆಕ್ಕಾಚಾರವಾಯಿತೇ ವಿನಾ, ಸ್ವಾಮಿಗಳಾದವರು ಆತ್ಮಸಾಧನೆ ಎಷ್ಟು ಮಾಡಿದ್ದಾರೆ ಎಂಬುದು ಗೌಣವಾಗುತ್ತಿದೆ. ಇಂದು ಮಠಾಧಿಪತಿಗಳಾದವರು ಇತ್ತ ಗಮನ ಹರಿಸಬೇಕಾಗಿದೆ. ಅಥಣಿಯ ಶಿವಯೋಗಿಗಳು ಎಷ್ಟು ಶಿಕ್ಷಣ ಸಂಸ್ಥೆ ತೆರೆದಿದ್ದರು-ಅರವಿಂದರು, ರಮಣ ಮಹರ್ಷಿಗಳು, ಶಿಕ್ಷಣ ಸಂಸ್ಥೆಗಳನ್ನು ತೆರೆದು ಹೆಸರಾದರೆ, ಆತ್ಮಸಾಧನೆ ಬಹು ದೊಡ್ಡ ಸಂಪತ್ತು. ನಮಗೂ ಹೀಗನ್ನಿಸಿದೆ-ಇಷ್ಟೆಲ್ಲಾ ಸಂಸ್ಥೆಗಳನ್ನು ಪ್ರಾರಂಭಿಸಿ ನಡೆಸುತ್ತ ಬಂದೆವು. ಆದರೆ ನಮ್ಮ ಆತ್ಮಸಾಧನೆಯನ್ನು ಇನ್ನೂ ಹೆಚ್ಚು ಮಾಡಿಕೊಳ್ಳಬಹುದಾಗಿತ್ತಲ್ಲ ಎಂಬುದಾಗಿ. "ನಿನ್ನೊಡವೆಯೆಂಬುದು ಜ್ಞಾನರತ್ನ" ಎಂದ ಪ್ರಭುದೇವರ ವಾಣಿ ಅಂತರಂಗದಲ್ಲಿ ನುಡಿಯುತ್ತದೆ. ಆತ್ಮಸಾಧನೆ ಎಂಬುದು ಅಂತರಂಗದ ರತ್ನ ಅನುಭಾವದ ಬೆಳಕು.

" ಮಾಟಕೂಟ " ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ " ಮಾಡಿದೆ " ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದರಲೊಲ್ಲ ಕೂಡಲಸಂಗಮದೇವಾ.

—ಶ್ರೀ ಬಸವೇಶ್ವರ

# ಶ್ರೀಸಿದ್ಧಲಿಂಗೇಶ್ವರ ವಚನ



ಓಂ

ಅರ್ಥ ಪ್ರಾಣಾಭಿಮಾನವನು
ಗುರು-ಲಿಂಗ ಜಂಗಮದ ಮುಖಕ್ಕೆ ಅರ್ಪಿಸಿ
ಆ ಗುರು-ಲಿಂಗ ಜಂಗಮವೆ
ತನುಮನ ಪ್ರಾಣವಾಗಿರಬಲ್ಲರೆ
ಭಕ್ತನ ಸ್ಥಲವಿದೆಂಬೆನಯ್ಯಾ
ಮಹಾಲಿಂಗ-ಗುರು ಶಿವಸಿದ್ದೇಶ್ವರ ಪ್ರಭುವೇ॥

ಮಾನವರನ್ನು ಪ್ರಪಂಚದ ಮಹಾಗರ್ಭದಲ್ಲಿ ತಳ್ಳಿ ಅನಂತ ರೀತಿಯಿಂದ ದುಃಖ ದುಮ್ಮಾನಗಳನ್ನುಣ್ಣ ಹಚ್ಚಿರುವುದು ಅರ್ಥ, ಪ್ರಾಣ, ಅಭಿಮಾನಗಳೇ ! ಎಲ್ಲಿಯತನಕ ದೇಹದಲ್ಲಿ ನಾನು ನನ್ನದೆಂಬ ಅಹಂಕಾರ ಮಮಕಾರಗಳು ನೆಲೆಸಿರುವವೋ ಅದರಂತೆ ಪ್ರಾಣದಲ್ಲಿ ಪ್ರೀತಿ, ಅರ್ಥದಲ್ಲಿ ಆಸಕ್ತಿ ದೃಢವಾಗಿ-ರುವವೋ ಅಲ್ಲಿಯತನಕ ಪ್ರಾಪಂಚಿಕ ಕಷ್ಟನಷ್ಟಗಳನ್ನು ಅನುಭವಿಸುವುದು ಅನಿವಾರ್ಯವೇ ಆಗುವುದು. ಆದಕ್ಕಾಗಿ ಪ್ರಾಪಂಚಿಕ ತೊಂದರೆಗಳನ್ನು ತಪ್ಪಿಸಿ ಕೊಂಡು ಪಾರಮಾರ್ಥಿಕ ಸುಖವನ್ನು ಸವಿಯಬೇಕೆಂದು ಬಯಸುವವನು ಅರ್ಥ ಪ್ರಾಣಾಭಿಮಾನಗಳನ್ನು ಗುರುಲಿಂಗ ಜಂಗಮರಿಗೆ ಅರ್ಪಿಸಿ, ಆ ಗುರು ಲಿಂಗ ಜಂಗಮವೆ ತನ್ನ ತನು-ಮನ ಪ್ರಾಣಗಳನ್ನಾಗಿ ಮಾಡಿಕೊಂಡರೆ ಭಕ್ತನೆನಿಸುವನು.

ಯಾವ ವಸ್ತುಗಳನ್ನು ತ್ಯಾಗಮಾಡಲಾಗುವುದೋ ಅವುಗಳ ಮೇಲೆ ಅಧಿಕಾರ ಇರುವುದಿಲ್ಲ. ವಸ್ತುಗಳಮೇಲೆ ಅಧಿಕಾರವನ್ನು ಬಿಟ್ಟುಕೊಟ್ಟಾಗಲೇ ಅವುಗಳ ತ್ಯಾಗವಾಗುವುದು, ಇಲ್ಲವಾದರೆ ತ್ಯಾಗವೆನಿಸದು. ಒಮ್ಮೆ ಗುರು-ಲಿಂಗ-ಜಂಗಮರಿಗೆ ತನು-ಮನ-ಧನಗಳನ್ನು ಅರ್ಪಿಸಿದಮೇಲೆ ಅವುಗಳಬಗ್ಗೆ ನಮ್ಮದೇನೂ ಅಧಿಕಾರವಿರುವುದಿಲ್ಲ. ಅರ್ಪಿಸಿದವುಗಳೆಲ್ಲ ಪ್ರಸಾದವಾಗುವುದರಿಂದ ಅಂಥವುಗಳಕೂಡ ವರ್ತಿಸಿದರೆ ಯಾವ ಹಾನಿಗೂ ಅವಕಾಶ ವಿರುವುದಿಲ್ಲ. ಸಂಸಾರದ ತಾಪತ್ರಯುವನ್ನೂ ಕಳೆದುಕೊಳ್ಳಲಿಕ್ಕೆ ತನು-ಮನ-ಧನಗಳನ್ನು ಗುರು-ಲಿಂಗ-ಜಂಗಮರಿಗೆ ಅರ್ಪಿಸಿ ಪ್ರಸಾದ ಬುದ್ಧಿಯಿಂದ ಅವುಗಳಕೂಡ ಸಂಬಂಧವನ್ನಿಟ್ಟು ಕೊಳ್ಳುವಲ್ಲಿಯೇ ಜೀವನದ ಪಾವಿತ್ರ್ಯವುಂಟು.

[ಕೃಪೆ : ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗೀಶ್ವರರು ನಿರೂಪಿಸಿದ ಷಟ್‌ಸ್ಥಲ] ಜ್ಞಾನಾಮೃತ]

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ - 572 104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

**ಪ್ರ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹಸಂಪಾದಕರು

**ಬಿ. ವೀರಭದ್ರಯ್ಯ**

**ಪಿ. ಎನ್. ಚಂದ್ರಶೇಖರಯ್ಯ**

**ಎಂ. ರೇಣುಕಾರಾಧ್ಯ**

* * *

ಜಾಹಿರಾತುವಿಭಾಗ

**ಸಿ. ಬಿ. ಶಂಕರಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 300-00


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ

ತುಮಕೂರು ಜಿಲ್ಲೆ-572104.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

**ಶೋಭೆ ತರುವಂಥದ್ದಲ್ಲ :**

ಮೊನ್ನೆ ಅಯೋಧ್ಯೆಯಲ್ಲಿ 6-12-92 ರಂದು ಬಹುದೊಡ್ಡ ಘಟನೆ ನಡೆದು ಹೋಯಿತು. ರಾಮ ಮಂದಿರ ಕಟ್ಟುವ ಉತ್ಸಾಹದಲ್ಲಿ ಬಾಬರಿ ಮಸೀದಿಯನ್ನು ಭಗ್ನಗೊಳಿಸಲಾಯಿತು. ಹಿಂದೂ ಧರ್ಮ ಸಹಿಷ್ಣುತೆಗೆ ಹೆಸರಾದುದು. ರಾಮ ಮರ್ಯಾದಾಪುರುಷೋತ್ತಮ. ಆದರ್ಶ ಪುರುಷ. ಮನುಕುಲಕ್ಕೆ ಮಾದರಿ. ಅಂಥ ಪುಣ್ಯಾತ್ಮನ ಹೆಸರಿನಲ್ಲಿ ಹೀಗಾಗ ಬಾರದಿತ್ತು ಎಂದು ದೇಶದ ಮುಖಂಡರು, ಧಾರ್ಮಿಕ ನಾಯಕರು ಖಂಡನೆಯನ್ನು ವ್ಯಕ್ತಪಡಿಸಿದರು. ಸಾವು ನೋವುಗಳಂತು ಲೆಕ್ಕವಿಲ್ಲ ದಷ್ಟಾಯಿತು. ಅಮಾಯಕರು ಕಣ್ಮುಚ್ಚಿದರು. ಮಣ್ಣಿನಲ್ಲಿ ಹೂತು ಹೋದರು. ರಾಷ್ಟ್ರದ ಉದ್ದಗಲದಲ್ಲಿ ಹಿಂಸಾಚಾರ ಭುಗಿಲೆದ್ದಿತು. ಸಾರ್ವಜನಿಕ ಜೀವನ ನೆಮ್ಮದಿ ಗೆಟ್ಟಿತು. ಆತಂಕವಾಗಿ ಜೀವಿಸಿತು. ಹೊರಗೆ ಕಾಲಿಟ್ಟರೆ ಹೇಗೋ ಎಂಬ ಭಯದ ಕರಿ ನೆರಳು ವ್ಯಾಪಿಸಿತ್ತು. ಶತಮಾನಗಳಿಂದ ಶಾಂತಿ ಸಹಬಾಳುವೆಯಿಂದ ಬಾಳಿದ ಭಾರತೀಯರ ಮನಸ್ಸು ಒಡೆಯುವಂತಾಯಿತು. "ಅನ್ಯರಿಗೆ ಅಸಹ್ಯಪಡಬೇಡ" ಎಂಬುದನ್ನು ಮರೆತಂತಾಯಿತು. ಬಸವಣ್ಣ ಅಂದೇ ಹೇಳಿದ, "ಉಳ್ಳವರು ಶಿವಾಲಯವ ಮಾಡುವರು......' ಎಂಬುದಾಗಿ. ಹೌದು ದೇವಾಲಯಗಳು ಪ್ರೀತಿ ವಿಶ್ವಾಸಗಳ, ಶ್ರದ್ಧೆ ಭಕ್ತಿಗಳ ಪವಿತ್ರ ಸ್ಥಾನಗಳಾಗುವುದರ ಬದಲು ದ್ವೇಷಾಸೂಯೆ ಗಳ, ಮಚ್ಚರವನ್ನೂದುವ ಕಿಚ್ಚುಗಳಾಗುತ್ತಿರುವುದು. ದುರ್ದೈವ. ಭಾರತೀಯರೆಲ್ಲ ತಲೆತಗ್ಗಿಸಬೇಕಾದ ಸಂಗತಿ. ಬಸವಣ್ಣ ಇವೆಲ್ಲವನ್ನೂ ಊಹಿಸಿದ್ದನೇನೋ ಆದಕ್ಕಾಗಿಯೇ ಇಷ್ಟಲಿಂಗವನ್ನೂ ಕೊಟ್ಟ. ಅದರಲ್ಲಿ ನಿಷ್ಠೆ ಬೆಳೆಸಿಕೊಳ್ಳಿ ಎಂದ. 'ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲವಾದ ಲಿಂಗವನ್ನು' ತಂದಿತ್ತ. ಅದಕ್ಕಾಗಿ ಮಂದಿರಬೇಡ, ಮಹಲುಬೇಡ. ವ್ಯಕ್ತಿ ಇದ್ದಲ್ಲಿ ಇದ್ದಂತೆ ತನಗಿಷ್ಟ ಬಂದಂತೆ ಪೂಜೆ ಮಾಡಬಹುದೆಂಬುದನ್ನು ತೋರಿಸಿಕೊಟ್ಟ. ಇಷ್ಟ ಲಿಂಗದ ಪೂಜೆ ಯಲ್ಲಿ ಹಿಂಸಾಚಾರಕ್ಕೆ ಅವಕಾಶವಿಲ್ಲ. ಆತ್ಮವಿಕಾಸಕ್ಕೆ ಅಪಾರ ಅವಕಾಶ ಅಲ್ಲಿ. ವಿಚಾರ ಪ್ರಿಯರು ಶರಣರು. ಸಮಾಜವನ್ನು ಪ್ರೀತಿ ಪ್ರೇಮಗಳ ಬುನಾದಿಯ ಮೇಲೆ ಕಟ್ಟಿದರು, ಮಂದಿರಗಳನ್ನು ಹೃದಯದಲ್ಲಿ ಕಟ್ಟಿದರು. ಮಾನವ್ಯತೆಯ ಮಂಗಳ ದೀಪ ವನ್ನು ಬೆಳಗಿದರು. ಇಷ್ಟಲಿಂಗೋಪಾಸನೆ ಇದೆಷ್ಟು ಕಲ್ಯಾಣಕರ ಎಂಬುದನ್ನು ಇನ್ನಾದರೂ ಸಮಾಜ ಮನಗಾಣಬೇಕು. ಮಂದಿರವಾಗಲಿ, ಮಸೀದಿಯಾಗಲಿ ಸಮಾಜದ ಸಂಘಟನೆಗೆ ಸಹಕಾರಿಗಳಾಗಬೇಕೇ ಹೊರತು, ಸಾವು ನೋವುಗಳಿಗೆ ದಾರಿಮಾಡಿಕೊಡಬಾರದು. ಶಾಂತಿಪ್ರಿಯರಾದ ಭಾರತೀಯರೆಲ್ಲ ವಿವೇಕ ಪೂರ್ಣ ರಾಗಿ ನಡೆದುಕೊಳ್ಳುವ ಸದ್ಭಾವಿಗಳಾಗಬೇಕು. ಮಸೀದಿ ಒಡೆದರೆ ಮತ್ತೆ ಮಸೀದಿ ಕಟ್ಟಬಹುದು, ಮನಸ್ಸು ಒಡೆದರೆ ಹೇಗೆ ಸರಿಪಡಿಸುವುದು. ಪ್ರಜಾತಂತ್ರಾತ್ಮಕ ಬೃಹತ್ಭಾರತದಲ್ಲಿ ಎಲ್ಲರೂ ನೆಮ್ಮದಿಯಿಂದ ಬಾಳುವ ಕಲೆಯನ್ನು ಎಷ್ಟು ಬೇಗ ಅರಿತರೆ ಅಷ್ಟೂ ಒಳ್ಳೆಯದು. "ಸರ್ವೇ ಜನಾಃ ಸುಖಿನೋ ಭವಂತು" ಎಂಬುದೇ ಪ್ರಾಚೀನ ವಾಣಿಯಲ್ಲವೆ. ಭಾರತೀಯರ ನಿತ್ಯ ಮಂತ್ರತಾನೆ. ಹಾಗಾಗಲಿ ಎಂದು 'ಸಿದ್ಧಗಂಗಾ" ಹಾರೈಸುತ್ತದೆ.

# ಬೆಳಗಿಸೌ ಮಾತೆ

—ಮಂದಾಕಿನೀದೇವಿ

ಜಯ ಮಾತೆ, ಜಯಜನ್ಮಭುವಿ, ಜಗನ್ಮಾತೆ
ಜಯವಿರಲಿ ನಿನಗಿಂದು ಮಾನವತೆ ದಾತೆ....ಜಯಮಾತೆ......

ಧ್ಯಾನದೊಳು ಹಿರಿಧ್ಯಾನ ನಿನ್ನಾಮವೆನಗೆ
ಶ್ರೀ ಸರಸತಿಯ ಒಲವು ಕಾಂಬೆ ನಿನ್ನೊಳಗೆ
ಜೀವಕುಲ-ದೈವಬಲವೆಲ್ಲ ನಿನ್ನೊಳಗೆ
ಜೀವನದ ಕಣಕಣವು ಬೆಳಗಿಸೌ ಮಾತೆ.......೧

ಕ್ರೂರತನ, ಕಪಟ, ಕಾಮುಕದ ಸಂಗರದಿ
ಶೂರಳಾಗುವೆ ಮನದ ಹೀನತೆಯ ಜಯಿನೆ
ದೂರ ಮಾಡದೆ ಇರಿಸು ನಿನ್ನ ಪದತಲದಿ
ಪ್ರೇಮ ಸಂಜೀವನದಿ ಬೆಳಗಿಸೌ ಮಾತೆ ......೨

ಆಳುವೆನು ಬಾಳನ್ನು ಕಾರ್ಯಬಲದಿಂದ
ಆಗಸದ ಎತ್ತರದ ಹೆಬ್ಬಯಕೆಯಿಂದ
ಆದರದಿ ಆರಾಧಿಸುವೆ ಆತ್ಮ ಬಲದಿ
ಆದರ್ಶದೆಡೆಗೆನ್ನ ಕರೆದೊಯ್ಯೆ ಮಾತೆ...........೩

ಆದರ್ಶ ಸಾಧನೆಯ ಫಲವು ಬೇಡೆಂಬೆ
ಆ ಹರ್ಷದುನ್ಮಾದ ಬೇಡ ಜಗದಂಬೆ
ಆವರ್ತನದ ಸಾವು-ಬದುಕು ಬೇಡೆನಗೆ
ಅನುದಿನವು ಅನುನಯದಿ ಇರಿಸೆನ್ನ ಮಾತೆ.......೪

ಮನ-ಮಂದಿರದಿ ಎನ್ನ ಜನಮನವನಿರಿಸಿ
ಜನಮನದ ಗರ್ಭಗುಡಿಯನ್ನು ಸಿಂಗರಿಸಿ
ತನುಮನದಿ ಪೂಜಿಸುವೆನಲ್ಲಿ ನಿನ್ನಿರಿಸಿ
ಮನ-ಮನವು ಬೆಳಗಿಸೌ ನೀ ಎನ್ನ ಮಾತೆ...... ೫

ಜಯ ಮಾತೆ ಜಯಜನ್ಮಭುವಿ ಜಗನ್ಮಾತೆ...........

# ಇತಿಹಾಸ ಅಭ್ಯಸಿಸಬೇಕೇ ?

ನ್ಯಾಯಮೂರ್ತಿ ಕೊ. ಬ. ಸಾವದಗಿ, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು.

ನಮ್ಮ ಪ್ರಜಾತಂತ್ರದ ತಳಹದಿ ಪ್ರಜಾಪ್ರಭುತ್ವ. ನಮ್ಮ ದೈನಂದಿನ ಜೀವನದ ನೆಲೆ ಪ್ರಜಾಪ್ರಭುತ್ವ. ರಾಷ್ಟ್ರಕ್ಕೆ ಎದುರಾದ ಎಲ್ಲ ಸಮಸ್ಯೆಗಳ ಪರಿಹಾರಕ್ಕೆ, ನಾವು ಮಾಡಿದ ತಂತ್ರದ ಹಿಡಿದ ಸೂತ್ರಗಳ ಹಾದಿ, ಪ್ರಜಾಪ್ರಭುತ್ವ ಆಧಾರಿತ. ನಮ್ಮ ಸಮಸ್ಯೆಗಳ ಪರಿಹಾರವನ್ನು ಕಂಡು ಹಿಡಿಯುವಲ್ಲಿ ಪರಸ್ಪರ ವಿಚಾರ ವಿನಿಮಯ ಸರ್ವರಿಗೆ ಒಪ್ಪಿಗೆಯಾಗುವ ದಾರಿಯನ್ನು ಹಿಡಿಯಬೇಕೆಂಬುದು ನಮ್ಮ ದೃಢವಾದ ನಿರ್ಧಾರ. ಪ್ರಜಾಪ್ರಭುತ್ವದಲ್ಲಿ ನಮ್ಮದು ಅಚಲವಾದ ನಿಷ್ಠೆ, ಹಾಗೂ ವಿಶ್ವಾಸ.

ನಮ್ಮ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಗಳಲ್ಲಿ 'ಶಾಸನಕ್ಕೆ' ಅಗ್ರಸ್ಥಾನ, ಅಗ್ರಪೂಜೆ, 'ಶಾಸನದ ಆಡಳಿತ' ನಮ್ಮ ಮೂಲಮಂತ್ರ. ವ್ಯಕ್ತಿ ಸ್ವಾತಂತ್ರ್ಯ ಸಮಾನತೆ, ಭ್ರಾತೃತ್ವದ ಮೌಲ್ಯಗಳನ್ನು ಪರಿಣಾಮಕಾರಿಯಾಗಿ ಹಾಗೂ ಅರ್ಥಪೂರ್ಣವಾದ ರೀತಿಯಲ್ಲಿ ಅನುಷ್ಠಾನಕ್ಕೆ ತರುವ ನಮ್ಮ ಯಜ್ಞದಲ್ಲಿ ಪ್ರಜಾಪ್ರಭುತ್ವ ಮತ್ತು ಶಾಸನದ ಆಡಳಿತ ನಮ್ಮ ಸ್ಫೂರ್ತಿಯ ಶಿಲೆಗಳು.

## ಮಹಾನ್ ರಾಷ್ಟ್ರಪ್ರಜೆ

ಇತಿಹಾಸದ ಪುಟಗಳನ್ನು ತಿರುವಿದಾಗ, ನಮ್ಮ ರಾಷ್ಟ್ರದ ಭವ್ಯ ಪರಂಪರೆಯ ಘನತೆಯ ಸಾಂಸ್ಕೃತಿಕ ಸಂಪತ್ತಿನ ಅರಿವು ಮರುಕಳಿಸ ಬಹುದು. ನಮ್ಮ ಅಂತಃಕಲಹ ದ್ವೇಷ, ಸ್ವಾರ್ಥ ಮನೋಜ್ಞಾನ, ಅಸೂಯೆ ಹೇಗೆ ಪರಕೀಯರ ಆಕ್ರಮಣಕ್ಕೆ ಅವಕಾಶ ಕಲ್ಪಿಸಿಕೊಟ್ಟವು ಅನ್ನುವುದನ್ನು ಇತಿಹಾಸ, ನಮಗೆ ಹೇಳುತ್ತದೆ. ನಮ್ಮಲ್ಲಿಯ ದ್ವೇಷ, ವೈಷಮ್ಯಗಳು, ವೈರಭಾವನೆಗಳು, ಮತ್ತೊಬ್ಬರ ಏಳ್ಗೆ ಸಹಿಸದ ಪ್ರವೃತ್ತಿ ಹೇಗೆ, ಲಾಭಕ್ಕಾಗಿ ಬಂದ ಪರಕೀಯರಿಗೆ ನಮ್ಮ ಮಾತೃ ಭೂಮಿಯನ್ನು ಆಕ್ರಮಿಸಿ ಹತೋಟಿ ಸಾಧನೆ, ಪ್ರಭುತ್ವ ಸ್ಥಾಪಿಸಲು ನೆರವಾದವು ಅನ್ನುವುದನ್ನು, ಸಾರಿ ಸಾರಿ ಹೇಳುವ ಪ್ರಮಾಣ ಗ್ರಂಥ ಇತಿಹಾಸ. ಜಗತ್ತಿನಲ್ಲಿಯೇ ವಿನೂತನವಾದ ಸತ್ಯ, ಶಾಂತಿ, ಅಹಿಂಸೆ, ಸತ್ಯಾಗ್ರಹಗಳಂಥ ಅಸ್ತ್ರಗಳ ಮೂಲಕ ರಾಷ್ಟ್ರಪಿತ ಗಾಂಧೀ-ಜಿಯವರ ಹಿರಿತನದಲ್ಲಿ ಮತ್ತು ಅನೇಕಾನೇಕ ರಾಷ್ಟ್ರ ಧುರೀಣರ, ನೇತೃತ್ವದಲ್ಲಿ ನಾವು ಹೂಡಿದ ಸ್ವಾತಂತ್ರ್ಯ ಸಮರ. ಆ ಸಮರದಲ್ಲಿ ನಾವುಗಳಿಸಿದ ಅದ್ಭುತ ಹಾಗೂ ಅದ್ವಿತೀಯ ವಿಜಯದ ಮೈನವರೇಳಿಸುವ, ಘಟನೆಯ ಸರಪಣಿಯ ಸಾಲು-ಗಳನ್ನು ನಾವು ಇತಿಹಾಸದ ಪುಟಗಳಲ್ಲಿ ಕಾಣುತ್ತೇವೆ. ದಾಸ್ಯದ ಸಂಕೋಲೆ ಕಳಚಿ-ಕೊಂಡು ಗುಲಾಮ ಗಿರಿಯಿಂದ ಮುಕ್ತವಾಗಿ, ಸ್ವಾತಂತ್ರ್ಯದ, ಗಾಳಿ, ಬೆಳಕು, ಉಸಿರನ್ನು ಕಂಡು, ದೇಶದ ಒಗ್ಗಟ್ಟನ್ನು, ವ್ಯಕ್ತಿತ್ವದ ಘನತೆಯನ್ನು ಎತ್ತಿ ಹಿಡಿಯುವ

ಆಶ್ವಾಸನೆಯೊಂದಿಗೆ, ಎಲ್ಲರಿಗೂ ಸ್ವಾತಂತ್ರ್ಯ ಸಮಾನತೆ, ಭ್ರಾತೃತ್ವದ ಆಶೋತ್ತರಗಳ ಭರವಸೆಯೊಂದಿಗೆ, ಜಾತ್ಯಾತೀತ ಸಮಾಜವಾದ ಆಧಾರಿತ ಸಾರ್ವಭೌಮತ್ವದ ಗಣತಂತ್ರವನ್ನು ಆದರಿಸಿದ ಸಂವಿಧಾನವನ್ನು ಸ್ವೀಕರಿಸಿದ ಮಹಾನ್ ರಾಷ್ಟ್ರದ ಪ್ರಜೆಗಳಾಗಿದ್ದೇವೆ.

## ಕಷ್ಟದ ಕಾರ್ಯಕ್ರಮ

ವಿಸ್ತಾರದ ವ್ಯಾಪಕತೆ ಭಿನ್ನ ಭಿನ್ನ ಸಂಸ್ಕೃತಿಗಳ ಬೇರೆ ಬೇರೆ ಭಾಷೆಗಳ ಮಧುರವಾದ ಆದರೆ ಸೌಮ್ಯತೆ ಅಥವಾ ಹೋಲಿಕೆಗೆ, ಒಳಗಾಗದ ಬಾಳಿನ ನಿಲುವು ಒಲವುಗಳನ್ನು ಹೊಂದಿದ ವ್ಯವಸ್ಥೆಗಳ ಸಂಗಮ ನಮ್ಮ ದೇಶ. ಭಿನ್ನತೆಯಲ್ಲಿ ಏಕತೆ-ಯನ್ನು ಕಂಡು, ದೇಶದ ಐಕ್ಯತೆ ಸಮಗ್ರತೆ ಸಂಲಗ್ನತೆ ಹಾಗೂ ಸಾರ್ವಭೌಮತ್ವವನ್ನು ಕಾಪಾಡಿಕೊಂಡು ಸಂರಕ್ಷಿಸಿ ರಾಷ್ಟ್ರದ ಪುನಃ ನಿರ್ಮಾಣದ ಕಠಿಣವಾದ ಕಷ್ಟಮಯ-ವಾದ ಕಾರ್ಯಕ್ರಮ ನಮ್ಮದು.

ಸಮಾಜದಲ್ಲಿಯ ಅಂಕು ಡೊಂಕುಗಳನ್ನು. ಏರುಪೇರುಗಳನ್ನು ಭೇದ ಭಾವ-ಗಳನ್ನು ಆರ್ಥಿಕ ವಿಷಮತೆಗಳನ್ನು ಸಾಮಾಜಿಕ ದೌರ್ಬಲ್ಯಗಳನ್ನು ಹೊಡೆದೋಡಿಸಿ ಶಾಂತಿ, ನೆಮ್ಮದಿ, ಸ್ವಾಸ್ಥ್ಯ, ಹಾಗೂ ಮತೀಯ ಸೌಹಾರ್ದತೆ ಹಾಸುಹೊಕ್ಕಾಗಿ ಬೆಳೆದ ಭವ್ಯ ರಾಷ್ಟ್ರ ನಿರ್ಮಾಣ ನಮ್ಮ ಗುರಿ. ಈ ಸಾಧನೆಯ ಸಿದ್ಧಿಗಾಗಿ ರಾಷ್ಟ್ರಕ್ಕೆ ನಮ್ಮೆಲ್ಲರ ಸಹಕಾರ, ಸಹಾಯಕ ಹಾಗೂ ನಿಷ್ಕಲ್ಮಷ ಸೇವೆ ಅತ್ಯವಶ್ಯಕ.

ಪ್ರಜಾತಂತ್ರ ಹಾಗೂ ಗಣತಂತ್ರದ ವ್ಯವಸ್ಥೆಯ ವೊರೆಯಲ್ಲಿ ಎಲ್ಲರ ಹಿತಕ್ಕಾಗಿ ಎಲ್ಲರ ಉನ್ನತಿಗಾಗಿ ವ್ಯಕ್ತಿ ಆಧಾರಿತ ಮತ್ತು ಮಾರ್ಕ್ಸವಾದದ ನಡುವಿನ ಹಾದಿಯನ್ನು ಹಿಡಿದು ಯೋಜನೆಗಳ ಮೂಲಕ ದೇಶದ ಸಾಮಾಜಿಕ ಸಾಸ್ಥ್ಯವನ್ನು ಸಾಂಪತ್ತಿಕ ಸ್ಥಿತಿಯ ಪ್ರಗತಿಯನ್ನು ಸಾಧಿಸುವ ಆಣತಿ ಕೊಟ್ಟವರು, ನವಭಾರತದ ಶಿಲ್ಪಿ ಪಂ. ಜವಾಹರಲಾಲ ನೆಹರೂ. ಈ ಆಣತಿಯ ಪ್ರಯೋಗಕ್ಕೆ ಅನುಷ್ಠಾನಕ್ಕೆ ಸಮಸ್ಯೆಗಳನ್ನು ತಂದೊಡ್ಡುವ ಸಾಮಾಜಿಕ ಪಿಡುಗುಗಳನ್ನು, ದೃಷ್ಟಿಯಿಂದ ದೂರತಳ್ಳುವ ಒಂದು ವ್ಯವಸ್ಥೆ ಬೇಕು. ಅಂತಹವಾತಾವರಣ, ಪರಿಸರ ಹಾಗೂ ಸನ್ನಿವೇಶ.

## ಶಿಕ್ಷಣ ಮಹಾಚೇತನ

ಈಗ ನಮ್ಮ ರಾಷ್ಟ್ರದಲ್ಲಿ ಹಗಲು ದೀವಿಗೆ ಹಿಡಿದು ಹುಡುಕಿದರೂ ಕಾಣುವುದಿಲ್ಲ. ಜಾತೀಯ ದ್ವೇಷ, ಅಸೂಯೆ, ಮತ್ಸರ, ಕ್ಷುಲ್ಲಕ ಕಾರಣಗಳಿಗೂ ಸಿಡಿದೇಳುವ, ಭೀತಿಯ ಛಾಯೆ ನಮ್ಮನ್ನು ಇಂದು ಆವರಿಸಿದೆ. ಈ ಧಾರುಣವಾದ ಕತ್ತಲೆಯಿಂದ ಹೊರ ಬಂದು ಅಂಜಿಕೆ ಹಾಗೂ ಭೀತಿಯಿಲ್ಲದ, ವಾತಾವರಣದಲ್ಲಿ ನಮ್ಮ ನಾಯಕರ

ಕನಸನ್ನು ನಾವು ನನಸನ್ನಾಗಿ ಮಾಡಬೇಕಿದೆ. ಅದಕ್ಕೆ ಪೂರಕ ಹಾಗೂ ಪ್ರೇರಕವಾಗಿ ನಿಲ್ಲುವ ಶಕ್ತಿ, ಸಾಮರ್ಥ್ಯ ಕೇವಲ ಪರಸ್ಪರ ವಿಚಾರ ವಿನಿಮಯ ತಿಳುವಳಿಕೆಯಿಂದೊ. ಡಗೂಡಿದ ಸಹಜೀವನಕ್ಕೆ ಇದೆ ಎಂದರೆ ಅತಿಶಯೋಕ್ತಿಯಾಗದು. ಅಂದಾಗಲೇ ನಿರೀಕ್ಷಿತ ಸೇವೆ ಅಪೇಕ್ಷಿತ ಮಟ್ಟದಲ್ಲಿ ನಮ್ಮಿಂದ ದೇಶಕ್ಕೆ ಲಭ್ಯವಾಗುವುದು ನಮ್ಮ ರಾಷ್ಟ್ರ ಪ್ರೇಮದಿಂದ, ಭ್ರಾತೃತ್ವ ಭಾವನೆಯಿಂದ ಸಾಮಾಜಿಕ ಮೌಲ್ಯಗಳ ಪ್ರಜ್ಞೆಯಿಂದ ನಾವು ಸಹಬಾಳ್ವೆಗೆ ಅಣಿಯಾಗಬೇಕು. ಅಂಥಹ ಪ್ರೇಮ, ಭಾವನೆ ಪ್ರಜ್ಞೆಗಳಿಸಲು ನಮಗೆ ಶಿಕ್ಷಣ ಬೇಕು. ವಿವೇಕ ಹಾಗೂ ವಿವೇಚನೆ ಪೂರ್ಣವಾದ ನಿರ್ಧಾರದ ಶಕ್ತಿಗೆ ಒಂದು ಮಹಾ ಚೇತನ ಶಿಕ್ಷಣ.

ಇತಿಹಾಸ, ಕಲ್ಪನೆಯಲ್ಲಿ ಘನವಾದದ್ದು, ವಿಷಯ ತಿಳಿಸುವಲ್ಲಿ ಹೇರಳವಾದದ್ದು, ಹಾಗೂ ತನ್ನ ಧ್ಯೇಯದಲ್ಲಿ ಅತ್ಯುನ್ನತೆಯನ್ನು ಹೊಂದಿದ ಒಂದು, ವಿಜ್ಞಾನ ಎಂದು ಬಲ್ಲವರು ಹೇಳುತ್ತಾರೆ. ಈ ವಿವರಣೆಯ ಸಾರ್ಥಕತೆಯನ್ನು ನಾವು ಮನಗಾಣ. ಬೇಕಾದರೆ, ನಾವು ಇತಿಹಾಸವನ್ನು ಓದಬೇಕು ಓದಿಸಬೇಕು.

## ನಿರ್ಧಾರದ ಗುಣ ವಿಶ್ಲೇಷಣೆ

ಇತಿಹಾಸದಲ್ಲಿ ಬೇರೆ ಬೇರೆ ಪ್ರಕಾರಗಳು ಇವೆ. ಸರ್ವಸುಂದರವಾದ, ಜಗತ್ತಿನ ಅನೇಕ ಅನನ್ಯ ರಮಣೀಯವಾದ ಗೃಹಗಳಲ್ಲಿ ನಮ್ಮದೊಂದು, ಚಿಕ್ಕಗೃಹ.

ಈ ಗೃಹದ ಹುಟ್ಟನ್ನು ಕಾಣುವುದು ಸುಭವಲ್ಲವಾದರೂ, ಆದರೆ ಬೆಳವಣಿಗೆ ಯನ್ನು ಮಾನವನ ನೆನಪಿನ ಎಲೆಯಲ್ಲಿ, ಮೆಲುಕು ಹಾಕುವುದು. ಅಂಥಹ ಕಷ್ಟಕರ ವಾದ ಕೆಲಸವಲ್ಲವೆಂದು ಭಾವಿಸಿದರೆ, ತಪ್ಪಾಗಲಿಕ್ಕಿಲ್ಲ. ಮಾನವನ ವಿಕಾಸದ ಕಥೆ. ಯೆಂದರೆ, ರಾಕ್ಷಸಿ ಪ್ರವೃತ್ತಿಯಿಂದ ನಾಗರಿಕತೆಗೆ ಮುಟ್ಟಿದ ಅವನ ಸಹ ಪ್ರಯಾಸದ ತೀರ್ಥ ಪ್ರವಾಸ. ನಮ್ಮ ಲೋಕದ ಇತಿಹಾಸ, ಹೆಚ್ಚಾಗಿ ಮನುಕುಲದ ಇತಿ. ಹಾಸವೇ ಎಂದರೆ ತಪ್ಪಾಗಲಿಕ್ಕಿಲ್ಲ. ಈ ಸಾಮಾನ್ಯ ಹಿನ್ನೆಲೆಯಲ್ಲಿ ಹಾಗೂ ನಮ್ಮ ದೇಶದಲ್ಲಿ ಕಂಡು ಬರುವ, ಕಾಣುವ ಪ್ರಕ್ಷುಬ್ಧ ಪರಿಸ್ಥಿತಿಯ ಸಂದರ್ಭದಲ್ಲಿ ನಾವು ಈ ಲೇಖನದ ವಿಷಯದ ಬಗ್ಗೆ ಆಲೋಚಿಸಬೇಕಾಗಿದೆ. ಇತಿಹಾಸ ಒಂದು ಗೊಡ್ಡು ರಾಜ ಮಹಾರಾಜರುಗಳ ಜೀವನ ಕಥೆ ಹೇಳುವ ಒಂದು ನೀರಸವಾದ ವರ್ಣನೆ, ಗತ ವೈಭವವನ್ನು ಚಿತ್ರಿಸುವ ನಿರರ್ಥಕ, ಸತ್ವಹೀನವಾದ ಒಂದು ಸಾಹಿತ್ಯ ಅನ್ನುವ ಭಾವನೆ ನಮ್ಮಲ್ಲಿ ಸಾಮಾನ್ಯ. ಆದರೆ ಇಂದಿನ ಕಷ್ಟಮಯವಾದ, ಕ್ಲಿಷ್ಟತಮವಾದ ನಮ್ಮ ದೇಶದ ಪರಿಸ್ಥಿತಿಯಲ್ಲಿ ಅದರ ಮಹತ್ವವನ್ನು ನಾವು ವಿವೇಕ ಚಿತ್ತದಿಂದ ವಿಶ್ಲೇಷಿಸಿದಾಗ, ಈ ಸಾಮಾನ್ಯ ಭಾವನೆಯ ಹುಸಿಯನ್ನು ನಾವು ಮನಗಾಣುತ್ತೇವೆ.

ಇತಿಹಾಸ ಕಲಿಸುವುದು ಕಲಿಯುವುದು ಅಭ್ಯಸಿಸುವುದು ಎಂದಿಗಿಂತಲೂ ಇಂದು ಹೆಚ್ಚು ಅಗತ್ಯವಾಗಿದೆ.

ಇತಿಹಾಸದ ಅಭ್ಯಾಸ ನಮ್ಮ ದೇಶದ ಆಗು ಹೋಗುಗಳ ಬಗ್ಗೆ, ಅಳಿಸಲಾಗದ ಪ್ರಜ್ಞೆಯನ್ನು ನಮ್ಮಲ್ಲಿ ಮೂಡಿಸುತ್ತದೆ. ಅದು ನಮಗೆ "ನಿರ್ಣಯದ" ಒಂದು ಮಾನಸಿಕ ಮಹಾಶಕ್ತಿಯ ಪ್ರಜ್ಞೆಯನ್ನು ಬೆಳೆಸುವಲ್ಲಿ ಸಹಾಯಕ ಮಾಡುತ್ತದೆ. ನಮ್ಮ ವಿದ್ಯಾರ್ಥಿಗಳ ಬೋಧಕರು, ಸಂಶೋಧಕರು ಏಕೆ ಇತಿಹಾಸ? ಎಂಬ ಪ್ರಶ್ನೆಗೆ ಒಂದೇ ಅರ್ಥ ಪೂರ್ಣವಾದಾಗ ಮಾರ್ಮಿಕವಾದ ಉತ್ತರ "ನಿರ್ಣಯ' ಶಕ್ತಿಯ ಹುಟ್ಟು ಹಾಗೂ ವರ್ಧನೆ.

ಇಂದು ನಾವು ಈ "ನಿರ್ಧಾರದ ಗುಣವನ್ನು ವೈದ್ಯರಲ್ಲಿ, ನ್ಯಾಯವಾದಿಗಳಲ್ಲಿ, ಅಡಿಗೆ ಮನೆಯಲ್ಲಿರುವವರಲ್ಲಿ, ಉದ್ದಿಮೆದಾರರಲ್ಲಿ, ವ್ಯಾಪಾರಿಗಳಲ್ಲಿ ಉತ್ಪಾದನೆ ಕೇಂದ್ರಗಳಲ್ಲಿ ಕೆಲಸ ಮಾಡುವ ಕಾರ್ಮಿಕರಲ್ಲಿ, ಹೊಲದಲ್ಲಿ ಉಳುವ ರೈತರಲ್ಲಿ ಸರಕಾರ, ಸಂಸ್ಥೆಗಳಲ್ಲಿ ಕೆಲಸ ಮಾಡುವವರಲ್ಲಿ ಹಾಗೂ ಉಳಿದ ಕ್ಷೇತ್ರಗಳಲ್ಲಿರುವ ನಮ್ಮ ಸಹೋದರರಲ್ಲಿ ಕಾಣಬೇಕಾಗಿದೆ. ಈ ನಿರ್ಧಾರದ ಗುಣ ನಮ್ಮ ನಾಗರೀಕತೆಯ ಆಧಾರ ಸ್ಥಂಭಗಳಾದ ರಾಷ್ಟ್ರಭಕ್ತಿ, ನಮ್ಮ ಸಹೋದರರ ಉನ್ನತಿಯ ಬಗ್ಗೆ ನಮ್ಮ ಸಹಾನುಭೂತಿ, ಹಾಗೂ ಒಳ್ಳೆಯವನಾಗಿ ಇರುವ ಒಳ್ಳೆಯದನ್ನು ಮಾಡುವ ಪ್ರವೃತ್ತಿ, ಗುಣಗಳ ಶಾಶ್ವತ ಸ್ಥಾನಕ್ಕಾಗಿ ಅತಿ ಅವಶ್ಯ. ನಮ್ಮಲ್ಲಿ ಸಂಪೂರ್ಣವಾಗಿ ತಿಳಿದಿದ್ದರೂ ತಿಳಿದಿದ್ದನ್ನು ಸಂಪೂರ್ಣವಾಗಿ ಹೇಳುವ ಧೈರ್ಯ ಕಡಿಮೆ. ತಿಳಿದಿದ್ದನ್ನು ನೇರವಾಗಿ ಹೇಳುವ ಸ್ಥೈರ್ಯ ನಮ್ಮಲ್ಲಿ ಅನೇಕರಲ್ಲಿ ಇಲ್ಲ.

## ಇತಿಹಾಸದ ನಿರ್ಲಕ್ಷ್ಯ

ನಮ್ಮ ಶಾಲೆಗಳಲ್ಲಿ ಮಹಾ ವಿದ್ಯಾಲಯಗಳನ್ನು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ನಾವು ಇತಿಹಾಸದ ಬೋಧನೆಗೆ ಸಲ್ಲಬೇಕಾದ ಸ್ಥಾನವನ್ನು ಕೊಟ್ಟಿಲ್ಲ. ಅಲ್ಲಿ ಅದರ ಬೋಧನೆಗೆ ಬೇಕಾದ ಅವಕಾಶವಿಲ್ಲ. ಒಟ್ಟಿಗೆ ಹೇಳಬೇಕಾದರೆ ನಾವು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ 'ಇತಿಹಾಸ' ವನ್ನು ನಿರ್ಲಕ್ಷ್ಯ ಮಾಡಿ ಕಡೆಗಣಿಸಿದ್ದೇವೆ. ಶೈಕ್ಷಣಿಕ ರಂಗದಲ್ಲಿ ಇತಿಹಾಸಕ್ಕೆ ನೀಡಬೇಕಾದ ಸ್ಥಾನ ನಾವು ನೀಡಿಲ್ಲ. ಕೊಡಬೇಕಾದ ಮನ್ನಣೆ ನಾವು ಕೊಟ್ಟಿಲ್ಲ ಎಂಬ ಅಭಿಪ್ರಾಯ ಹುರುಳಿಲ್ಲದೆ ಇಲ್ಲ. 21 ನೆಯ ಶತಮಾನಕ್ಕೆ ಉಳಿದ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಜೊತೆಗೆ, ವಿಜ್ಞಾನ ತಾಂತ್ರಿಕತೆಯಲ್ಲಿ ಪೈಪೋಟಿ ಮಾಡುವ ಉಚ್ಛ್ರಾಯ ಸ್ಥಿತಿಯಲ್ಲಿದ್ದ ನಮ್ಮ ರಾಷ್ಟ್ರಕ್ಕೆ ಇತಿಹಾಸ ಅವಶ್ಯಕತೆಯೇನು ? ಎಂದು ಕೇಳುವವರಿದ್ದಾರೆ. ಅವರಿಗೆ ಮಾರ್ಮಿ

ಕವಾದ ಉತ್ತರ ಒಂದೇ 'ನಿರ್ಣಯಶಕ್ತಿ' ಉಗಮಕ್ಕೆ ನಾಂದಿ ಹಾಡುವ ವ್ಯವಸ್ಥೆ ಇತಿಹಾಸ.

ಈ ಶಕ್ತಿ, ನಮಗೆ ನಮ್ಮ ಆಡಳಿತ ವ್ಯವಸ್ಥೆಯ ಅರಿವು ಕೊಟ್ಟು ಆಡಳಿತ ಚುಕ್ಕಾಣಿಗಳನ್ನು ಸೂತ್ರಗಳನ್ನು ಸರ್ವತೋಮುಖ ಅಭಿವೃದ್ಧಿಗೆ ಹೇಗೆ ಹೊಂದಾಣಿಸಿ ಕೊಳ್ಳಬಹುದು, ಎನ್ನುವುದನ್ನು ನಮಗೆ ತಿಳಿಸಿ, ಆದಕ್ಕೆ ನಮ್ಮನ್ನು ಅಣಿಗೊಳಿಸುತ್ತದೆ. "ನಿರ್ಧಾರ" ಜೀವನದ ಯಶಸ್ಸಿಗೆ ಬೇಕಾದ ಜಾಣ್ಮೆ, ಸೂಕ್ಷ್ಮದೃಷ್ಟಿ, ಸಹೃದಯತೆ ಹೃದಯ ಶ್ರೀಮಂತಿಕೆ ಹೃದಯ ವೈಶಾಲ್ಯತೆ, ಸಮನ್ವಯ ದೂರದೃಷ್ಟಿ, ರಾಷ್ಟ್ರನಿಷ್ಠೆ ರಾಷ್ಟ್ರದ ಒಳತಿಗಾಗಿ ನಿರಪೇಕ್ಷೆಯ ನಿರಾಡಂಬರ, ನಿಷ್ಕಾಮ ಸೇವೆಮಾಡುವ ಮನೋ ವೃತ್ತಿಯನ್ನು ನಮ್ಮಲ್ಲಿ ಮೂಡಿಸಿ, ಅರಳಿಗೆ ಅವು ತೇಜಸ್ಸಿನಿಂದ ಬೆಳಗಲು ಹಾಗೂ ಪ್ರಜ್ವಲಿಸಲು ಉಭಯ ಹಸ್ತವನ್ನು ಕೊಡುವ ಸಾಧನ. ಇತಿಹಾಸದ ವ್ಯವಸ್ಥಿತ, ರೀತಿಯ ಬೋಧನೆ, ಅಭ್ಯಾಸ ನಮಗೆ ಮಾನವ ಸ್ವಭಾವದ, ಮಾನವ ಸಮಾಜದ ಶುಭಾಶುಭ ಸನ್ನಿವೇಶಗಳು ಪರಸ್ಪರ ವಿರೋದಾಭಾಸದ ವಾತಾವರಣಗಳ ಹಾಗೂ ಸೌಹಾರ್ದಯುತ ಪರಿಸರದ ಅರಿವಿನ ಪ್ರಜ್ಞೆಯನ್ನು ಹುಟ್ಟಿಸುತ್ತದೆ.

## ಕಂಕಣ ಬದ್ಧರಾಗುವಾ

ಇತಿಹಾಸ, ನಮಗೆ ನಮ್ಮನ್ನು ಚೆನ್ನಾಗಿ ತಿಳಿದುಕೊಳ್ಳುವಲ್ಲಿ ಪರರನ್ನು ಚೆನ್ನಾಗಿ ಅರಿಯುವಲ್ಲಿ ಸಹಾಯಕಮಾನವಕುಲದ ಅನಿಷ್ಟಗಳಲ್ಲಿ ಹಿರಿಮೆ ಹೆಗ್ಗಳಿಕೆಗಳಲ್ಲಿ ನಮ್ಮ ಆತ್ಮೀಯ ಭಾವನೆಗಳನ್ನು ಬೆಳೆಸುವಲ್ಲಿ ನಮಗೆ ಬೇಕಾದ ಮನೋಸ್ಥೈರ್ಯವನ್ನು ಕೊಡುವ ಒಂದೇ ಒಂದು ಸಾಧನೆ, ಇತಿಹಾಸ.

ಇತಿಹಾಸ ಸಾಮ್ಯತೆಯಿಂದೊಡಗೂಡಿದ ಹೋಲಿಕೆಗಳ ಅಧಾರದ ಮೇಲೆ, ನಮಗೆ ಪಾಠಗಳನ್ನು ಕೊಡುತ್ತದೆ ರಾಷ್ಟ್ರದ ಒಗ್ಗಟ್ಟಿಗಾಗಿನಾವೆಲ್ಲಾ ಒಕ್ಕೊರಲಿನಿಂದ ಕಹಳೆಊದಿ ದೃಢನಿಷ್ಠೆಯಿಂದ ಕಂಕಣ ಬದ್ಧರಾಗಬೇಕಾಗಿದೆ. ಪರಕೀಯರ ದುಪ್ರೇ-ರಣೆಯಿಂದ ಭಯೋತ್ಪಾದಕ ಶಕ್ತಿಗಳು ತಮ್ಮ ವಿಷಪೂರಿತ ಹೆಡೆಗಳನ್ನು ಎತ್ತಿ, ತಮ್ಮ ಭಯಾನಕ ರಾಷ್ಟ್ರವಿರೋಧಿ ಭಾವನೆಗಳಿಂದ ದೇಶದ ಐಕ್ಯತೆಗೆ ಸವಾಲೊಡ್ಡಿದ್ದೇವೆ. ದೇಶಛಿದ್ರಮಾಡುವ ವಿಚ್ಛಿದ್ರಕಾರಕ ಶಕ್ತಿಗಳ ನಿರ್ದಾಕ್ಷಿಣ್ಯವಾದ ದಮನ ಮತ್ತು ಶಮನ ಇಂದು ನಡೆಯಬೇಕಾಗಿದೆ ಜಾತ್ಯಾತೀತ ರಾಷ್ಟದಲ್ಲಿ, ಸ್ವಧರ್ಮ ಅಭಿಮಾನ ಪರಧರ್ಮ ಸಹಿಷ್ಣುತೆಯ ಆಧಾರದ ಮೇಲೆ ಜಾತೀಯ ಸಾಮರಸ್ಯವನ್ನು ತಂದು ಕಲುಷಿತ ವಾತಾವರಣದಲ್ಲಿ ತಿಳಿಗೊಳಿಸಬೇಕಾಗಿದೆ. ಈಗ ಸಂದಿಗ್ಧ ಸಮಯದಲ್ಲಿ ನಮ್ಮ ರಾಷ್ಟ್ರ ಹಿಂದೆ, ಹೇಗೆ ಇಂತಹ ಶಕ್ತಿಗಳಂದ ಹರಿದು ಹಂಚಿ ಹೋಳಾಗಿ ಹೋಯಿತು. ಆ ಸಮಸ್ಯೆಯನ್ನು ನಮ್ಮ ಹಿಂದಿನವರು ಹೇಗೆ ನಿಭಾಯಿಸಿದರು ಅನ್ನುವ

ವಿವರಣೆ ನಮಗೆ ಅಪ್ರಯೋಜಕವೇ ? ಜಯಬಂಧನ, ಪಿತೂರಿ ಅನೇಕ ರಾಜದ್ರೋಹಗಳ ಪ್ರಸಂಗಗಳು, ಶಿವಾಜಿ ಮಹಾರಾಜನ ರಾಷ್ಟ್ರಭಕ್ತಿ, ಅಕ್ಬರ ಬಾದಶಹನ ಸರ್ವ-ಧರ್ಮ ಸಮನ್ವಯತೆಯ ದೃಷ್ಟಿ, ರಾಷ್ಟ್ರಪಿತ ಗಾಂಧೀಜಿಯ ಕೆಚ್ಚೆದೆಯ ಸತ್ಯಾಗ್ರಹದ ವಿವರಣೆಗಳು ನಮಗೆ ಅಪ್ರಯೋಜಕವೇ ?

ಇಂದಿನ ಸಮಸ್ಯೆಗಳಿಗೆ ತತ್ವಹೀನ ಸಮಾಧಾನಗಳನ್ನು ತಳ್ಳಿಹಾಕುವಲ್ಲಿ ಹಾಗೂ ಸತ್ಯಾಧಾರಿತ ಸಂಗತಿಗಳ ಮತ್ತು ಕಲ್ಪನೆಗಳು ಸುಳಿವಿಗೆ ಸಿಕ್ಕ ವಿಚಾರಗಳ ಅಂತರ, ಅರ್ಥಮಾಡಿಕೊಳ್ಳುವಲ್ಲಿ, ಇತಿಹಾಸದ ಪಾಠಗಳು, ನಮಗೆ ಅಗತ್ಯ. ಪ್ರಭುತ್ವದ ಅವಹೇಳನದ ಅಧಿಕಾರದ ದುರುಪಯೋಗದ ಪ್ರಸಂಗಗಳು ನಮ್ಮಲ್ಲಿ ನಡೆದುಹೋಗಿವೆ. ಅಂತಹ ಪ್ರಸಂಗಗಳನ್ನು ತಪ್ಪಿಸುವ ನಿಯಂತ್ರಿಸುವ ಹಾಗೂ ನಿಭಾಯಿಸುವ ಅಂತಃ ಸತ್ವವನ್ನು ಕೊಡುವುದು ಇತಿಹಾಸ. ಅನಿವಾರ್ಯವಾಗಿ ಬರಲಿರುವ ಸಮಸ್ಯೆಗಳನ್ನು ಕಂಡು ಅವು ಎದುರಾದಾಗ ಅವುಗಳನ್ನು ನಿವಾರಿಸುವ ಅಮೂಲ್ಯವಾದ ಪ್ರಜ್ಞೆಯನ್ನು ಕೊಡುವ ಏಕೈಕ ಸಾಧನ ಇತಿಹಾಸ. ಇತಿಹಾಸದಿಂದ ನಾವು ಕಂಡ ದುರ್ಭರ ಪ್ರಸಂಗಗಳು ನಿರ್ವಿಕಾರ ಮನೋಭಾವದ ಅವಲೋಕನ ಸಾಧ್ಯ. ಆಕಸ್ಮಿಕವಾಗಿಯಾಗಲೀ, ವ್ಯವಸ್ಥಿತ ಪ್ರಯತ್ನದಿಂದಾಗಲೀ, ಸಮಾಜದ, ಶಾಂತಿ ಕದಡಿದ ನಿದರ್ಶನಗಳನ್ನು ನಮಗೆ ಕೊಟ್ಟು ಅಂಥಹ ಪ್ರಸಂಗಗಳು ಬಾರದಂತೆ, ನಮ್ಮನ್ನು ಜಾಗೃತಗೊಳಿಸುವುದು ಇತಿಹಾಸ.

## ಭಾರತ ಧರ್ಮದರ್ಶಿಗಳು ಗಮನಿಸಲಿ

ಸ್ವಾತಂತ್ರ್ಯ ಸಂಗ್ರಾಮದ ಮೈನವಿರೇಳಿಸುವ ವಿವರಣೆಗಳು, ದೇಶದ ಸ್ವಾತಂತ್ರ್ಯಕ್ಕಾಗಿ ನಮ್ಮ ನಾಯಕರು ಮಾಡಿದ ಅಪ್ರತಿಮ ಅಸಾಧಾರಣ ತ್ಯಾಗ ಸೇವೆಯ ಸ್ಮರಣೀಯ ಘಟನೆಗಳು, ನಮ್ಮ ವಿದ್ಯಾರ್ಥಿಗಳ ಮೇಲೆ ಅಚ್ಚಳಿಯದ ಪ್ರಭಾವ ಹಾಗೂ ಪರಿಣಾಮ ಬೀರಿ ಅವರಲ್ಲಿ ರಾಷ್ಟ್ರಾಭಿಮಾನದ, ರಾಷ್ಟ್ರಸೇವೆಯ, ಪ್ರವೃತ್ತಿಯನ್ನು ಮೂಡಿಸಿ, ಬೆಳೆಸುವಲ್ಲಿ ಸಹಾಯ ಮಾಡುವುದು, ನಮ್ಮ ಸ್ವಾತಂತ್ರ್ಯ ಚಳುವಳಿಯ ಇತಿಹಾಸ.

ಜಗತ್ತಿನಲ್ಲಿ ಗುಲಾಮಗಿರಿಯನ್ನು ಎದುರಿಸಿ ಹೋರಾಡಿ ಜನತೆಗೆ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ತಂದುಕೊಟ್ಟ ನಿದರ್ಶನಗಳು ನಮಗೆ ಬೇಡವೆ ? ಪ್ರಜಾ-ತಂತ್ರ್ಯ ಅಳವಡಿಸಿಕೊಂಡು ನಮಗೆ ವ್ಯಕ್ತಿ ಸ್ವಾತಂತ್ರ್ಯ ಸಮಾನತೆ ಹಾಗೂ ಭ್ರಾತೃತ್ವ ಜೀವಾಳಗಳು, ಸಾಮಾಜಿಕ ನ್ಯಾಯ ನಮ್ಮ ಮೂಲ ಮಂತ್ರ ಅವುಗಳ ರಕ್ಷಣೆ, ಪೋಷಣೆ ಹಾಗೂ ಆರಾಧನೆ ನಮ್ಮ ದಿನನಿತ್ಯದ ಪ್ರವೃತ್ತಿಯಾಗಬೇಕು. ನಮಗೆ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಕಾಲಕಾಲಕ್ಕೆ ಗುಲಾಮಗಿರಿಯ ವಿರುದ್ಧ ಮಾಡಿದ ಕ್ರಾಂತಿಗಳು, ಸಮರಗಳು ನಮ್ಮಲ್ಲಿ ನಮಗೆ ಹಿತವಾದ, ಪ್ರಿಯವಾದ ಪ್ರಜಾತಂತ್ರದ ಸ್ಥಿರಸ್ಥಾಪನೆಗೆ

ನಿರಂತರವಾಗಿ ಪ್ರೇರಣೆ ಚೇತನ ಹಾಗೂ ಸ್ಫೂರ್ತಿ ಕೊಡುತ್ತವೆ.

ಇತಿಹಾಸದಿಂದೊಡಗೂಡಿದ ಸಮಾಜ ಶಾಸ್ತ್ರದ ಅಧ್ಯಯನ ಇಂದಿನ ಸಮಸ್ಯೆಗಳನ್ನು ತುರ್ತು ಪರಿಹಾರದ ಉತ್ತರಗಳೊಂದಿಗೆ ಅರಿಯಲು ಹೊಂದಾಣಿಕೆಗಳಿಗೆ ಒಗ್ಗಲು, ಹಕ್ಕುಗಳ ಜೊತೆಗೆ ಜವಾಬ್ದಾರಿಗಳನ್ನು ಸಂತೋಷದಿಂದ ವಹಿಸಿಕೊಳ್ಳಲು ನಮ್ಮ ಹಿತಾಸಕ್ತಿಗಳನ್ನು ಕಾಪಾಡುವುದರ ಜೊತೆಗೆ ಎರಡನೆಯವರ ಹಿತಾಸಕ್ತಿಗಳನ್ನು ಗೌರವಿಸಲು, ಮುಂದಿನ ಪೀಳಿಗೆಯ ಆಗತ್ಯಗಳ ಮನವರಿಕೆ ಮಾಡಿಕೊಳ್ಳಲು, ಅಸತ್ಯ ನುಡಿಯುವುದು ದ್ರೋಹ, ವಂಚನೆ ಮಾಡುವುದು ಲಾಭದಾಯಕವಿರುವ ಈ ಕಾಲದಲ್ಲಿ ಸತ್ಯ ನುಡಿದು ಶುದ್ಧವಾದ ಪ್ರಾಮಾಣಿಕವಾದ ಹಾಗೂ ಚಾರಿತ್ರ್ಯ ಶ್ರೀಮಂತಿಕೆ ಜೀವನ ನಡೆಸಲು ನಮ್ಮ ಸಮಸ್ಯೆಗಳ ನಿಜ ಚಿತ್ರಣವನ್ನು ಅರಿಯಲು ನಮ್ಮ ಪ್ರತಿನಿಧಿಗಳು ನಡೆಯಬೇಕಾದ' ದಾರಿ ತೋರಿಸಲು ಸಹಾಯವಾಗುವುದು.

ಇಂತಹ ಅಪರಿಮಿತ ಮೌಲ್ಯಗಳನ್ನು ಹೊಂದಿದ ಅಪೂರ್ವವಾದ. ಸುಂದರವಾದ, ''ಇತಿಹಾಸ' ವಿಜ್ಞಾನವನ್ನು ಕಡೆಗಣಿಸಿದರೆ, ನಾವು ಅತ್ಯಂತ ಘೋರವಾದ ಲೋಪಮಾಡಿ ರಾಷ್ಟ್ರದ ವ್ಯವಸ್ಥೆಗೆ ಭರಿಸಲಾರದ ನಷ್ಟವನ್ನು ತಂದುಕೊಡುವುದರಲ್ಲಿ ಸಂಶಯವಿಲ್ಲ. ಭವ್ಯ ಸಮೃದ್ಧ ಹಾಗೂ ಸಂಪದ್ಭರಿತ ರಾಷ್ಟ್ರದ ಕಲ್ಪನೆ ನಮ್ಮದು, ಇಂದಿನ ವಿದ್ಯಾರ್ಥಿಗಳು, ಯುವಕರು ಅಂಥಹ ರಾಷ್ಟ್ರ ನಿರ್ಮಾಣದ ಶಿಲ್ಪಿಗಳು. ಅವರು ನಮ್ಮ ಅಮೂಲ್ಯ ಸಂಪತ್ತು. ಅವರು ಭವ್ಯ ಭಾರತದ ಧರ್ಮದರ್ಶಿಗಳು, ಅವರಿಗೆ ಇತಿಹಾಸದ ಕಲ್ಪನೆ, ಬೋಧಿಸಿ ಅವರಲ್ಲಿ ರಾಷ್ಟ್ರಭಕ್ತಿಯನ್ನು ಅಂಕುರಿಸಿ ನಿರ್ಧಾರದ ಸಾಮರ್ಥ್ಯ ಅರಿವು ಮೂಡಿಸಿ, ಜನತೆಯ ಹಿತಕ್ಕಾಗಿ ಕಂಕಣ ಬದ್ಧರನ್ನಾಗಿ ಮಾಡುವುದು ನಮ್ಮ ಆದ್ಯ ಕರ್ತವ್ಯ.

ಈ ದಿಶೆಯಲ್ಲಿ ದೇಶದ ಅಭ್ಯುದಯದ ಚಿಂತನೆಯಲ್ಲಿರುವವರು, ಪಂಡಿತರು, ವಿದ್ವಾಂಸರು, ಶಿಕ್ಷಣ ತಜ್ಞರು, ವಿದ್ಯಾಪ್ರೇಮಿಗಳು, ಸಮಾಜ ಸುಧಾರಕರು, ರಾಜಕೀಯ ಧುರೀಣರು ಮುತ್ಸದ್ದಿಗಳು, ರಾಜಕೀಯ ಮಟ್ಟದಲ್ಲಿ ವಿಚಾರ ಮಂಥನ ನಡೆಸಿ ಸತ್ಯಾಂಶದ ಸಮಗ್ರ ಇತಿಹಾಸದ ಪಠ್ಯ ವಿಸ್ತರಣಗಳನ್ನು ರಚಿಸಿ, ಶಾಲೆಗಳಲ್ಲಿ ಮಹಾವಿದ್ಯಾಲಯಗಳಲ್ಲಿ ಶಿಕ್ಷಣ ಮಟ್ಟದ ಹಂತಗಳಿಗೆ ಅನುಗುಣವಾಗುವ ರೀತಿಯಲ್ಲಿ ಇತಿಹಾಸದ ಪಠ್ಯ ಕ್ರಮಗಳನ್ನು ಅಳವಡಿಸಿ, ಅದರ ಕಡ್ಡಾಯ ಬೋಧನೆಗೆ ಅನುವು ಮಾಡಿಕೊಟ್ಟಲ್ಲಿ ನಮ್ಮ ಭಾವಿ ಪೀಳಿಗೆಗೆ ನಾವು ಮಾಡಬೇಕಾದ್ದನ್ನು ಮಾಡಿ ನಮ್ಮ ಮೇಲಿನ ರಾಷ್ಟ್ರದ ಋಣಭಾರ ತೋರಿಸಿದಂತಾತ್ತದೆ ಎಂದು ನನ್ನ ಭಾವನೆ.

ಕೃಪೆ : "ಕನ್ನಡಿಗ"

# ಸಮಯ ಪಾಲನೆ

'ಅಪರ್ಣಾ' 1155, 26ಎ, ಮುಖ್ಯರಸ್ತೆ, ಜಯನಗರ 9ನೇ ಬ್ಲಾಕ್, ಬೆಂಗಳೂರು-560069

ನಮ್ಮಲ್ಲಿ ಎಲ್ಲರೂ ಕೈಗಡಿಯಾರ ಬೇಕೆನ್ನುವವರೆ. ಬಹುಮಂದಿ ಅದನ್ನು ಬಳಸಲಿ ಬಿಡಲಿ ಕೈಗೆ ಗಡಿಯಾರ ಬೇಕು. 'ಪುಸ್ತಕಂ ಹಸ್ತ ಭೂಷಣಂ' ಎನ್ನುವಂತೆ, ಅದೊಂದು ಅಲಂಕಾರಿಕ ವಸ್ತುವಾಗಿದೆ. ಹುಡುಗರು ಪರೀಕ್ಷೆಪಾಸುಮಾಡಿದಾಗ, ಮದುವೆ, ಹುಟ್ಟುಹಬ್ಬ, ಇತ್ಯಾದಿ ಹತ್ತು ಹಲವು ಕಾರಣಗಳಿಗಾಗಿ ಗಡಿಯಾರವನ್ನು ಬಹುಮಾನ-ವಾಗಿ ಪಡೆಯುತ್ತೇವೆ ಇಲ್ಲ ಕೊಡುತ್ತೇವೆ ಅದರಲ್ಲೂ ಬೆಲೆ ಹೆಚ್ಚಾದ, ವೈವಿಧ್ಯತೆಯ, ಚಿತ್ರ ವಿಚಿತ್ರ ಗಡಿಯಾರಗಳನ್ನು ಹೊಂದುವುದು ಅಂತಸ್ತಿನ ಕುರುಹಾಗಿದೆ.

ಗಡಿಯಾರದ ಉದ್ದೇಶವೇನು ? ಸಮಯ ತೋರಿಸುವುದು ಇಲ್ಲವೆ ನೆನಪಿಸುವುದು. ನಮ್ಮಲ್ಲಿಬಹಳಜನ ಆಫೀಸಿಗೆ, ಶಾಲೆಗೆ ಹೋಗಲು ಅದಕ್ಕಿಂತ ಹೆಚ್ಚಾಗಿ ಅಲ್ಲಿಂದ ಬಿಡಲು ಬಸ್ಸು, ರೈಲು ಮುಂತಾದ ಪ್ರಯಾಣ ವಾಹನಗಳನ್ನು ಹಿಡಿಯಲು ಗಡಿಯಾರ ಬಳಸ ಬಹುದು. ಉಳಿದಂತೆ ಅದೊಂದು ಆಭರಣ ಅರ್ಥವಿಲ್ಲದ ಆಭರಣ. ಅನೇಕರಿಗೆ ಕಾಲದ ಪ್ರಜ್ಞೆಯೇ ಇರುವುದಿಲ್ಲ. ಬೆಳಿಗ್ಗೆ 9-00ಗಂ.ಗೆ ಬರುವೆನೆಂದರೆ ಯಾವಾಗಲೋ ಬರಬಹುದು, ಬರದೆ ಇದ್ದರೂ ಇರಬಹುದು. ಸಾಮಾನ್ಯ ಜನರ ಮಾತಿರಲಿ ಗಣ್ಯ-ವ್ಯಕ್ತಿಗಳೂ ಸಭೆ, ಸಮಾರಂಭಗಳಿಗೆ ಕಾಲ ಮೀರಿ ಬರುವುದು ಹಿರಿತನದ ಸಂಕೇತ-ವೆಂದು ಭಾವಿಸುತ್ತಾರೆ. ನನ್ನ ಪ್ರೊಫೆಸರ್ ಒಬ್ಬರು ತರಗತಿಗೆ ಕಾಲಕ್ಕೆ ಸರಿಯಾಗಿ ಬರುತ್ತಿದ್ದರು. ಒಂದು ದಿನ ಅವರು ಬರುವುದು ಒಂದೇ ಒಂದು ನಿಮಿಷ ತಡವಾಯಿತು. ತಕ್ಷಣ ಕ್ಷಮೆ ಯಾಚಿಸಿದರು. ತರಗತಿಯಲ್ಲಿ 60 ಜನರಿದ್ದೆವು. ಅಂದರೆ'ವಿದ್ಯಾರ್ಥಿಗಳ ಒಂದು ಗಂಟೆಕಾಲವನ್ನು ವ್ಯರ್ಥ ಮಾಡಿದೆನಲ್ಲಾ' ಎಂಬ ಅಪರಾಧ ಪ್ರಜ್ಞೆಯಿಂದ ಈ ಕ್ಷಮಾ ಯಾಚನೆ. ಸರ್ ಎಂ.ವಿಶ್ವೇಶ್ವರಯ್ಯ, ಮಹಾತ್ಮ ಗಾಂಧೀಜಿ, ಜವಹರಲಾಲ್ ನೆಹರೂ, ರಾಜಾಜಿ ಮತ್ತು ಆ ಪೀಳಿಗೆಯ ಜನ ಕಾಲಕ್ಕೆ ವಿಶೇಷ ಗಮನ ಕೊಡುತ್ತಿ-ದ್ದರು. ಅನಿವಾರ್ಯವಾಗಿ ಸಭೆ, ಸಮಾರಂಭಗಳಿಗೆ ತಡವಾಗಿ ಬಂದರೆ ಕ್ಷಮೆ ಬೇಡುತ್ತಿದ್ದರು

ಸಮಯಪಾಲನೆಯನ್ನು ನಮ್ಮ ನಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ ಅನೇಕ ಕೊರತೆಗಳನ್ನು ನೀಗಬಹುದು; ಬಾಳನ್ನು ಹಸನಾಗಿ ಮಾಡಿಕೊಳ್ಳಬಹುದು. ಯಾರು ಸಮಯ ಪಾಲನೆ ಮಾಡುವುದಿಲ್ಲವೋ ಅವರು ಎಷ್ಟೇ ದೊಡ್ಡವರಿರಲಿ, ಅವರಿಗೆ ಸಮಯ ಪಾಲನೆ ಬಗೆಗೆ ಚುರುಕು ಮುಟ್ಟಿಸಿದರೆ ಅವರು ತಮ್ಮ ಜವಾಬ್ದಾರಿಯನ್ನು ಅರಿಯಲು ಸಾಧ್ಯವಾಗಬಹುದು. ಕಳೆದುಕೊಂಡ ಹಣವನ್ನು ಮತ್ತೆ ಗಳಿಸಬಹುದು; ಆರೋಗ್ಯ ಕೆಟ್ಟರೆ ಇಂದಲ್ಲ ನಾಳೆ ಔಷದೋಪಚಾರಗಳಿಂದ ಸುಧಾರಿಸಬಹುದು. ಆದರೆ ಹೋದ ಸಮಯ ಎಂದೆಂದೂ ಬಾರದು

ಕಾಲದ ಸದುಪಯೋಗದ ಬಗೆಗೆ ದಿವಂಗತ ಡಾ|| ಡಿ ವಿ. ಗುಂಡಪ್ಪ [ಡಿ.ವಿ.ಜಿ] ನವರ ಕೆಳಕಂಡ ಸೂಕ್ತಿಪ್ರಾಯವಾಗಿರುವ ಹತ್ತು ಅಂಶಗಳು ನಮ್ಮೆಲ್ಲರ ಅನುಷ್ಠಾನ ಯೋಗ್ಯವಾಗಿದೆ.

1. ಬೋರ್ [bore]ಹೊಡೆಯುವುದನ್ನು ಬಿಡಬೇಕು. ಹರಟೆ ಕಡಿಮೆ ಮಾಡಬೇಕು. 'ಬೋರ್' ಎಂಬುದು ಇಂಗ್ಲಿಷ್‌ನಲ್ಲಿ ನೀರಸವಾದ ಹರಟೆಯಿಂದ ಬೇಸರ ಹಿಡಿಸುವವನಿಗೆ ಕೊಟ್ಟ ಹೆಸರು. ಈ ಪ್ರಾಣಿ ನಮ್ಮಲ್ಲಿಯೂ ಉಂಟು. ಆದ್ದರಿಂದ ಬೋರ್ ತಪ್ಪಬೇಕು.

2. ಮಾತನಾಡುವಾಗ ಅತಿ ಅವಸರವೂ ಇರಬಾರದು; ಅತಿ ಸಾವಕಾಶವೂ ಆಗಬಾರದು 'ಅದ್ರುತಾಂ ಅವಲಂಬಿತಾಂ' ಎಂಬುದು ಶ್ರೀರಾಮ ದೇವರಿಗೆ ಮೆಚ್ಚಿಗೆ.

3. ವಿಸಿಟರುಗಳು ತಾವು ಹೊರಡುವ ಹೊತ್ತನ್ನು ಗೊತ್ತುಮಾಡಿಕೊಂಡು ಬೇಗ ಏಳಬೇಕು.

4. ಅನಾವಶ್ಯಕವಾದ ಭೇಟಿಯನ್ನು [unnecessary visit] ಮಾಡಬಾರದು. ಕೆಲಸವಿದ್ದರೆ ಭೇಟಿ.

5 ಕೆಲಸವಿದ್ದಾಗ ಮೊದಲು ಅದನ್ನು ಹೇಳಬೇಕು. ಕಾಗದದಲ್ಲಿಯೂ ಅಷ್ಟೆ. ನಮ್ಮ ಜನ ಏನೋ ಒಂದು ದಾಕ್ಷಿಣ್ಯವನ್ನೋ ಅಥವಾ ಸಹಾಯವನ್ನೋ ಕೇಳುವುದಕ್ಕೆ ಬಂದು, ತಾವು ಮೆಚ್ಚಿಸುತ್ತೇವೆಂದು ತಿಳಿದುಕೊಂಡು ಘಂಟೆಗಟ್ಟಲೆ ಯಾವ ಯಾವ ಮಾತನ್ನೋ ಆಡಿ ಕೊನೆಯಲ್ಲಿ ತಮ್ಮ ಕೆಲಸದ ಮಾತೆತ್ತುತ್ತಾರೆ ಇದರ ಪರಿಣಾಮ ಕಾಲ ಮತ್ತು ತಾಳ್ಮೆಯ ನಷ್ಟ. ಇದಕ್ಕೆ ಬದಲಾಗಿ ಕೆಲಸ ಮೊದಲಾಗಬೇಕು.

6. ಆಪ್ತ ಸ್ನೇಹ, ಗಾಢ ಸ್ನೇಹ ಇವು ಭೇಟಿಯನ್ನು ಅಪೇಕ್ಷಿಸುತ್ತವೆ. ಪ್ರೀತಿಯ ಮಾತು ಕೆಲಸವೆಂಬುದಕ್ಕೆ ಸೇರಿದ್ದಲ್ಲ ಆದರೆ ಪ್ರೀತಿಯ ಮಾತಿಗೂ ಕಾಲ ನಿಯಮವಿರಬೇಕು.

7. ಚೆಪ್ಪಾಟ ಆಟವಲ್ಲ; ಆಯುಷ್ಯದ ಕೊಲೆ

8. ಯಾವುದಾದರೊಂದು ಉದ್ಯೋಗವನ್ನೋ, ಉದ್ದೇಶವನ್ನೋ ನಮ್ಮ ಜೀವನದಲ್ಲಿ ಮುಖ್ಯವಾಗಿರಿಸಿಕೊಂಡರೆ ಜೊಳ್ಳು ಹರಟೆಗೆ ಪುರುಸೊತ್ತಾಗದು.

9. ಒಂದಾನೊಂದು ಗ್ರಂಥ ವ್ಯಾಸಂಗವನ್ನು ಗುರಿಯಾಗಿಟ್ಟುಕೊಂಡರೂ, ಅನ್ಯಥಾ ವ್ಯರ್ಥವಾಗುವ ಕಾಲವು ಅದಕ್ಕೆ ವಿನಿಯೋಗವಾಗುತ್ತದೆ.

10. ಕಾಲವು ಭಗವಂತನ ಒಂದು ರೂಪ ವಿಶೇಷ–ಆದಕಾರಣ, ಭಗವಂತನಿಗೆ

ಸಲ್ಲಬೇಕಾದ ಪೂಜೆ ಅದಕ್ಕೆ ಸಲ್ಲುತ್ತದೆ. ಹೀಗೆ ಕಾಲಹರಣವೆಂಬುದು [ಕಾಲವನ್ನು ಕೊಲ್ಲುವುದು–Time Killing] ಪುಣ್ಯಕಾರ್ಯವಲ್ಲವೆಂಬುದನ್ನು ನೆನಪಿನಲ್ಲಿಡಿ. ಒಂದು ಕ್ಷಣವನ್ನೂ ಪೋಲು ಮಾಡಬಾರದು. ಆದ್ದರಿಂದಲೇ ಈ ಪೂರ್ವಿಕ ವಚನ:-

ಕ್ಷಣಶಃ ಕಣಶಶ್ಚೈವ ವಿದ್ಯಾಮರ್ಥಂಚ ಸಾಧಯೇತ್ ।
ಗೃಹೀತ ಇವ ಕೇಶೇಶು ಮೃತ್ಯುನಾಧರ್ಮ ಮಾಚರೇತ್॥

ಜ್ಞಾನ ಸಂಪಾದನೆಗಾಗಿ ಕ್ಷಣ ಕ್ಷಣವನ್ನೂ ವಿನಿಯೋಗಿಸಿರಿ. ದ್ರವ್ಯ ಸಂಪಾದನೆಯಲ್ಲಿ ಕಣ ಕಣವಾಗಿ ಸೇರಿಸಿರಿ. ಹೀಗೆ ವಿದ್ಯಾರ್ಜನೆಯನ್ನು, ದ್ರವ್ಯಾರ್ಜನೆಯನ್ನೂ ಮಾಡುವುದರ ಜೊತೆಗೆ ಮೃತ್ಯುವು ನಿಮ್ಮನ್ನು ಜುಟ್ಟು ಹಿಡಿದೆಳೆಯುತ್ತಿದೆಯೋ ಎಂಬಂತೆ ಅಷ್ಟು ಶೀಘ್ರತೆಯಿಂದ ಧರ್ಮ ಮಾಡಿರಿ, ಇದು ನಮ್ಮ ಪೂರ್ವ ಪದ್ಧತಿ.

# ವೀರಗಲ್ಲು !

ಎಚ್. ಗವಿಸಿದ್ದಯ್ಯ, ಅಧ್ಯಾಪಕ, ಪ್ರೌಢಶಾಲೆ, ಆವತಿ ದೇವನಹಳ್ಳಿ ತಾ, ಬೆಂ-ಜಿಲ್ಲೆ

ನಮ್ಮೂರಿನ ಜನರ
ಪ್ರಾಣರಕ್ಷಣೆಗಾಗಿ
ಸಾಧ್ವೀ ಮಣಿಯ
ಶೀಲ ರಕ್ಷಣೆಗಾಗಿ
ಪ್ರಾಣ ಅರ್ಪಿಸಿದ
ವೀರಪುರುಷನ
ತ್ಯಾಗದ ಕುರುಹಾಗಿ
ನಿಂತಿದೆ ವೀರಗಲ್ಲು.
ನಮ್ಮೂರ ರಸ್ತೆಯ
ಒಂದು ಬದಿಯಲ್ಲಿ
ಆ ಧೀರನ ಶೌರ್ಯಕ್ಕೆ
ಮೂಕ ಸಾಕ್ಷಿಯಾಗಿ
ನಿನ್ನೆ ಮೊನ್ನೆಯಿಂದ
ಅದರ ಪಕ್ಕದಲ್ಲೇ
ತಲೆಯೆತ್ತಿದೆ ನೋಡಿ
ಸಾರಾಯಿ ಅಂಗಡಿ !
ನಮ್ಮ ಗತಕಾಲದ
ಸಂಸ್ಕೃತಿಯನ್ನೆಲ್ಲ
ಅಂಗಡಿಯಿಟ್ಟು ಮಾರಲು
ಕಲೆಸಾಹಿತ್ಯವನ್ನೆಲ್ಲ
ಧೂಳಿನಂತೆ ತೂರಲು.

# ಮಾತು ಹೇಗಿರಬೇಕು ?

ಪ. ರಾಮಕೃಷ್ಣ ಶಾಸ್ತ್ರಿ, "ಶಿವಶಕ್ತಿ ನಿಲಯ", ಅಂಚೆ: ಮುಚ್ಚಿನ-574295 [ದ.ಕ.] ಜಿಲ್ಲೆ.

ಮಾತು-ಹೇಗಿರಬೇಕು ಅನ್ನುವುದಕ್ಕೆ ವ್ಯಾಖ್ಯಾನಿಸಿದವರು ಅನೇಕರು. ನುಡಿದರೆ ಮುತ್ತಿನ ಹಾರದಂತಿರಬೇಕು, ಮಾಣಿಕ್ಯದಂತಿರಬೇಕು ಎಂದರು, ಮುತ್ತು ಬಿದ್ದರೆ ಹೆಕ್ಕಬಹುದು. ಮಾತು ಬಿದ್ದರೆ ಹೆಕ್ಕಲಾಗದು ಎಂದು ಮಾತು ತುಟಿ ಮೀರುವ ಮುನ್ನ ಜಾಗರೂಕತೆ ವಹಿಸಿಕೋ ಎಂದರು ನಾಣ್ಣುಡಿಕಾರರು. ಮಾತಿನ ಬಗೆಗೆ ನಮ್ಮಲ್ಲಿ ಇಂಥ ಮಾತುಗಳು ಅಸಂಖ್ಯಾತವಾಗಿರುವ ಕಾರಣದಿಂದಲೋ ಏನೋ ನಾವಂತೂ ಮಾತಿಗೆ ಅತಿಯಾದ ಬೆಲೆ ಕೊಡುತ್ತಿದ್ದೇವೆ. ಒಬ್ಬ ಭಾರತೀಯನ ಜೀವಮಾನವನ್ನು ಪರಿಗಣಿಸುವುದಾದರೆ ಬರೀ ಮಾತಿಗಾಗಿಯೇ ಅದರಲ್ಲಿ ಕೆಲವು ವರ್ಷಗಳು ಕರಗಿವೆ ಎಂದು ಎಣಿಸಬಹುದು.

ನಮ್ಮ ಯಾವುದೇ ಸಮಾರಂಭಗಳೂ ಮಾತಿನಿಂದಲೇ ಸಮೃದ್ಧಗೊಳ್ಳುತ್ತವೆ. ಸ್ವಾಗತ ಭಾಷಣ, ಅತಿಥಿ ಪರಿಚಯ, ಅಧ್ಯಕ್ಷ ಭಾಷಣ, ಸಮಾರೋಪ ಭಾಷಣ-ಕಡೆಗೆ ಇವೆಲ್ಲಕ್ಕಿಂತ ಉದ್ದವಾಗಿ ಮಾತಿನಲ್ಲಿ ತಾನೇನೂ ಕಮ್ಮಿ ಅಲ್ಲ ಎಂಬುದನ್ನು ವ್ಯಕ್ತಪಡಿಸಲು ವಂದನಾರ್ಪಣೆ ಮಾಡುವವನೂ ಬಲು ಉದ್ದ ಮಾತನಾಡುತ್ತಾನೆ. ಕಮ್ಮಿ ಮಾತನಾಡಿದವ ಏನೇನೂ ಅಲ್ಲ ಎಂದು ಸಭಿಕರೂ ತೀರ್ಮಾನಕ್ಕೆ ಬರುತ್ತಾರೆ. ಮುಂಜಿ ಮದುವೆಗಳಲ್ಲಂತೂ ಒಂದೆಡೆ ವಿಧಿಗಳು ನಡೆದಿರುವಾಗ ಇನ್ನೊಂದೆಡೆ ಸಭೆಯಲ್ಲಿ ಕುಳಿತವರು ಅಡಿಕೆ ಧಾರಣೆಯಿಂದ ಆರಂಭಿಸಿ, ಪ್ರಸಕ್ತ ರಾಜಕಾರಣದವರೆಗೆ ಅಲ್ಲಿ ಏನು ಸಂಗತವಲ್ಲವೋ ಅದೆಲ್ಲವನ್ನೂ ಕೊರೆದು ಮಾತಿನಲ್ಲಿ ಒಬ್ಬರಿಗಿಂತ ಒಬ್ಬರು ಮೇಲೆಂದು ತೋರಿಸಿಕೊಳ್ಳುತ್ತಾರೆ. ಕಾಲಹರಣಕ್ಕೆ ಮಾತನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲ.

ಇದನ್ನೆಲ್ಲ ಕಂಡೇ ಕೆಲವರು ಮೌನೇನ ಕಲಹಂ ನಾಸ್ತಿ ಎಂದರು. ಹಾಗೆಂದು ತುಟಿ ಹೊಲಿದುಕೊಂಡು ಕುಳಿತುಕೋ ಎಂಬುದು ಅದರ ಅಂತರಾರ್ಥವಲ್ಲ. ತಾಸುಗಟ್ಟಲೆ ಮಾತನಾಡುವುದು ಪ್ರೌಢಿಮೆಯೂ ಅಲ್ಲ. ಇನ್ನೊಬ್ಬರಿಗಾಗಿ ಭಗವದ್ಗೀತೆಯ ಬಗ್ಗೆಯೋ ಬಸವಣ್ಣನ ವಚನಗಳ ಬಗ್ಗೆಯೋ ಕೊರೆದು ತಲೆ ಚಿಟ್ಟು ಹಿಡಿಸುವವರು. ಮನೆಯಲ್ಲಿ ಕೆಲಸದವರಿಗೆ ಸಂಬಳ ಕೊಡುವಾಗ ಜಿಪುಣತನ ತೋರಿಸಿದರೆಷ್ಟು ಅರ್ಥವೇನಿದೆ? ಮಾಫಲೇಸು ಕದಾಚನ ಎಂದು ಗೀತೆಯಲ್ಲಿ ಕೃಷ್ಣ ಹೇಳಿದ್ದಾನೆಂದು ಹೆರವರಿಗೆ ಬೋಧಿಸುವ ಅವರು ಮಾತ್ರ ಅವರಿಗೆ ಪ್ರತಿಫಲವಿಲ್ಲದ ವ್ಯಕ್ತಿಗೆ ಹಿಡಿಕೂಳನ್ನಾದರೂ ಇಕ್ಕಲು ಹಿಂಜರಿದರೆ ಹೇಗೆ? "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾ" ಎಲ್ಲಿ ಸ್ತ್ರೀಯರಿಗೆ ಪೂಜೆ ಸಲ್ಲುತ್ತದೋ ಅಲ್ಲಿ ದೇವತೆಗಳಿರುತ್ತಾರೆ ಎಂಬ

ಶ್ಲೋಕವನ್ನು ದಿನವೂ ಬೇಗ್ಗೆದ್ದು ಪಠಿಸುವ ವಿದ್ವಾಂಸರು ದಿನವಿಡೀ ಹೆಂಡತಿಗೆ ಹಿಡಿಶಾಪ ಹಾಕುತ್ತಾ ಬೆನ್ನಿಗೆ ಹೊಡೆಯುತ್ತಿದ್ದರೆ ಅವನ ಬಗೆಗೆ ಏನೆನ್ನಬೇಕು. ?

ನಮ್ಮ ಮಾತು ಇನ್ನೊಬ್ಬರ ರಂಜನೆಗಾಗಿ ಇರಬಾರದು. ನಮ್ಮನ್ನು ನಾವು ತಿದ್ದಿಕೊಂಡು ನಡೆಯುವ ನಡಿಗೆಗೆ ಮಾತು ಪ್ರತಿಬಿಂಬವಾಗಿರಬೇಕು. ದೇಶಾವರಿ ನಗೆಯೊಂದಿಗೆ ಇನ್ನೊಬ್ಬನಿಗೆ ತೋರಿಸುವ ಬರಿಯ ಸಹಾನುಭೂತಿಯಿಂದ ನಾವೊಂದು ಜನ ಅನಿಸಿಕೊಳ್ಳಬಹುದೇವಿನಾ ನೊಂದವನ ಮನಸ್ಸಿನಲ್ಲಿ ಒಳ್ಳೆಯ ಸ್ಥಾನ ಗಿಟ್ಟಿಸಿಕೊಳ್ಳಲು ವ್ಯಾವಹಾರಿಕ ಚತುರತೆಯ ಮಾತಿನಿಂದ ಸಾಧ್ಯವಾಗದು. ಕೆಲವು ಬುದ್ಧಿವಂತರು ಮಾತು ಶಲಾಕಾಗ್ರದಂತೆ ಹರಿತವಾಗಿರಬೇಕು ಎನ್ನುವುದುಂಟು. ಅದರಿಂದ ಇನ್ನೊಬ್ಬರನ್ನು ನೋಯಿಸಬಹುದೇ ವಿನಾ ಇನ್ನೇನಿದೆ ಲಾಭ ? ಸರಕಾರಿ ಕಛೇರಿಯಲ್ಲಿರುವ ಒಬ್ಬ ನೌಕರ ತಾನು ತಿನ್ನುವ ಉಪ್ಪು ಈ ನಾಡಿನ ಪ್ರಜೆಗಳ ದುಡಿಮೆ ಎಂದು ತಿಳಿದಿದ್ದರೂ ತನ್ನ ಉಗ್ರವಾದ ಮಾತುಗಳಿಂದ ಬಂದವನ ಧೃತಿಗೆಡಿಸುತ್ತಾನೆ. ಇಲ್ಲವೆ ಮೌನವಹಿಸಿ ಕೇಳಿದುದಕ್ಕೆ ಉತ್ತರವನ್ನೇ ಕೊಡುವುದಿಲ್ಲ.

ಮಾತು ಯಾವಾಗಲೂ ಮಿತವಾಗಿ, ಇನ್ನೊಬ್ಬರನ್ನು ನೋಯಿಸದೆ, ಅಪಹಾಸ್ಯ ಮಾಡದೆ ನಮ್ಮ ಉದಾತ್ತ ನಡೆಯ ಒಂದು ಮುಖವಾಗಿದ್ದರೆ ಉತ್ತಮ ಮಾತಿಗಿಂತಲೂ ಅದರಂತೆ ನಡೆದುಕೊಳ್ಳುವುದೇ ಶ್ರೇಷ್ಠವಾದದ್ದು. ಜಪಾನಿನ ಅದ್ಭುತ ಬೆಳವಣಿಗೆಯ ಬಗೆಗೆ ಸಾವಿರ ಮಾತುಗಳನ್ನಾಡುವ ನಾವು ಅಡದೆಯೆ ಮಾಡುವವ ರೂಢಿಯೊಳಗುತ್ತಮನೆಂದು ಅರಿತುಕೊಳ್ಳುವುದಿಲ್ಲ. ಮಾತು ಕೊಲ್ಲಬಲ್ಲದು. ಹಾಗೆಯೇ ಉಳಿಸಲೂ ಬಲ್ಲುದು. ಅತಿಯಾದ ಮಾತುಗಾರಿಕೆಯಲ್ಲಿ ನಮ್ಮ ಸಮಯವನ್ನು ನಾವು ಕೊಲ್ಲುತ್ತಿರುವುದನ್ನು ಕಂಡೇ ದಾಸವರೇಣ್ಯರು "ಮಾನವ ಜನ್ಮ ಬಲು ದೊಡ್ಡದು ಹಾನಿ ಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ" ಎಂದು ಕರ್ತವ್ಯ ಪ್ರಜ್ಞೆಯನ್ನು ಜಾಗೃತಗೊಳಿಸಿದರು. ಡಾಂಭಿಕ ಪ್ರವೃತ್ತಿಗೆ ಮುಖ ಬಿಂಬವಾದ ಮಾತುಗಾರಿಕೆ ಎಂದಿಗೂ ಯಾರನ್ನೂ ಉದ್ಧಾರ ಮಾಡದು. ಮಾತು ಮುತ್ತಿನಂತಿದ್ದರೆ ಯಾರಿಗೇನು ಲಾಭವಿದೆ? ಆ ಮಾತನ್ನು ಪ್ರಾಸಂಗಿಕವಾಗಿ ಬಳಸುವುದೇ ಜಾಣತನ.

ಗಾಡಿಯಲ್ಲಿ ಅಕ್ಕಿಯ ಗೋಣಿಗಳನ್ನು ಹೇರಿಕೊಂಡು ಗಾಡಿಯಾಳೊಬ್ಬ ಜೊತೆಗಾರನೊಂದಿಗೆ ಹರಟುತ್ತಾ ಗಾಡಿ ಓಡಿಸಿದನಂತೆ. ಗಾಡಿಯ ಹಿಂದಿನಿಂದ ಒಂದೊಂದಾಗಿ ಹೇರನ್ನು ಕದ್ದುಕೊಂಡು ಹೋಗಿದ್ದಾರೆಂದು ಆತನಿಗೆ ಅರಿವಾದಾಗ ಬೆಳಗಾಗಿತ್ತು. ಮಾತು ಮಾತು ಪ್ರಸಂಗೇಣ ಗೋಣಿ ಅಕ್ಕಿ ವಿನಶ್ಯತಿ ಎಂದು ಆತ ತಲೆಗೆ ಕೈ ಹೊತ್ತನಂತೆ. ಅತಿಯಾದ ಮಾತು ಅವಾಂತರಕಾರಿ ಎನ್ನಲು ಇದೊಂದೇ ಉದಾಹರಣೆ ಸಾಕು.

# ಸಮಾಜವಾದ ಸಾರಿದ ಶರಣೆ ಲಕ್ಕಮ್ಮ

ರಾಜೇಂದ್ರ, 242, ಉತ್ತರಾಧಿ ಮಠದ ರಸ್ತೆ, ಮೈಸೂರು–570004.

ಭಕ್ತಂಗೆ ಬಡತನವುಂಟೆ? ನಿತ್ಯಂಗೆ ಮರಣವುಂಟೆ?
ಭಕ್ತರು ಬಡವರೆಂದು ಮತ್ತೊಂದ ಕೊಟ್ಟೆಹೆನೆಂದರೆ
ಮಾರಯ್ಯ ಪ್ರಿಯ ಅಮರೇಶ್ವರಲಿಂಗ
ಸತ್ತರಿದಿಗಲ್ಲದೆ ಬಡತನವಿಲ್ಲ.

ಕೇಳಿ ಬರುತ್ತಿದೆ. ಮಮಕಾರವನ್ನು ತೊರೆದ ತಾಯಿಂದ, ನಿರಾಶಾವಾದಿಗಳ ಬೀಡಿಂದ ಯಾರಿರಬಹುದು? ಈ ಅಮರವಾಣಿ. ದಿಟ್ಟತನದ ಈ ನುಡಿ ಏಕಿರಬಹುದು? ಯಾರಿಗೆ ಹೇಳಿರಬಹುದು. ಅತ್ತ ದೃಷ್ಟಿ ಹರಿಸಿದೆ ಕಂಡಿತ್ತು ಒಂದು ದೃಶ್ಯ. ಕಾಯಕ ಮಾಡಿ ಬಾಗಿಲಲ್ಲಿ ನಿಂತ ಪತಿ. ಆತನನ್ನು ಒಳಗೆ ಬಿಡದೆ ತಡೆದು ನಿಂತ ಶರಣೆ. ಪತಿಯನ್ನು ಬಾಗಿಲಲ್ಲಿ ನಿಲ್ಲಿಸಿದುದಕ್ಕೇನೋ ಮಹತ್ವಾದ ಕಾರಣ ಇರಬೇಕು. ಎಂದುಕೊಂಡು ಅತ್ತ ಕಿವಿ ಆಲಿಸಿದಾಗ ತೇಲಿಬಂದ ವಾಣಿಯಲ್ಲಿ ಸಮಾಜವಾದದ ಅಲೆ ಅಪ್ಪಳಿಸಿ ಬರುತ್ತಿತ್ತು. ಬಡಜನತೆಗೆ ಸಂತಸದ ಸುದ್ದಿ ಹೊತ್ತು ತರುತಿತ್ತು ಅಬ್ಬಾ! ಎಂಥ ನಿಲವು, ಎಂಬ ಉದ್ಗಾರ ಹೊರಟಿತು ಮಾತು ಕ್ಷಣ ಮೂಕವಾಗಿತ್ತು.

ಆ ಶರಣೆ ಯಾರು ಅಲ್ಲ. ಸಮಾಜವಾದವನ್ನು ಜಗತ್ತಿಗೆ ಸಾರಿ ಕಾಯಕದಲ್ಲಿ ಕೈಲಾಸ ಕಂಡ ಶರಣೆ ಲಕ್ಕಮ್ಮ, ಆಕೆಯ ಪತಿ ಮಾರಯ್ಯ. ಬಸವಣ್ಣನ ಮನೆಯ ತಿಪ್ಪೆಯ ತಪ್ಪಲ ಅಕ್ಕಿಯನ್ನು ಆರಿಸುವ ಕಾಯಕ. ಆತನದು ಆತ ಆರಿಸಿಕೊಂಡಿದ್ದ ಕಾಯಕದ ಉನ್ನತಿಯಲ್ಲಿ ಉದಾತ್ತ ತತ್ತ್ವ ಅಡಕವಾಗಿದೆ. ರೈತ ಕಷ್ಟ ಪಟ್ಟು ಬೆಳೆದು ಬೆವರು ಸುರಿಸಿ ಬೆಳೆದ ಒಂದೊಂದು ಧಾನ್ಯದ ಕಾಳು ಮುತ್ತಿನಷ್ಟೆ ಬೆಲೆಯುಳ್ಳದ್ದಾಗಿರುವುದು, ಆ ಕಾರಣ ಅದನ್ನು ಹಾಳು ಮಾಡುವ ಸಂಗ್ರಹಿಸಿಡುವ ಅಧಿಕಾರ ಯಾರಿಗೂ ಇಲ್ಲ ಎಂಬ ಈ ತತ್ತ್ವವನ್ನು ಅನುಸರಿಸಿ ಕಾಯಕ ಮಾಡಿದ್ದ ಶರಣರಿವರು.

ಸತ್ಯ ಶುದ್ಧ ಕಾಯಕ ಮಾರಯ್ಯನದು. ಅಲ್ಲಿ ಆಶೆಯ ಲೇಪನವಿಲ್ಲ. ಅಂದಂದಿನ ಅಂಬಲಿಗಾಗುವಷ್ಟು ಗಳಿಕೆ. ಸಂತೃಪ್ತಿಯ ಜೀವನ ಅವರದಾಗಿತ್ತು. ಆದರೆ ಅಂಥ ಶರಣನು ಒಮ್ಮೆ ಒಮ್ಮನವ ಮೀರಿ ಇಮ್ಮನದಿಂದ ಅಕ್ಕಿಯನ್ನು ಆರಿಸಿ ತಂದ. ಎಂದಿಗಿಂತ ಹೆಚ್ಚು ಅಕ್ಕಿಯನ್ನು ಇಂದು ತಂದುದೇ ಹಗರಣಕ್ಕೆ ದಾರಿ ಆಯ್ತು. ಇದು ಅಮರೇಶ್ವರ ಲಿಂಗಕ್ಕೆ ಸಲ್ಲದ ಬೋನ. ಅಲ್ಲಿಯೇ ಸುರಿದು ಬನ್ನಿ ಎನ್ನುತ್ತಾಳೆ ಆ ತಾಯಿ. ಆಕೆ ಇಂದಿನವರಂತಲ್ಲ. ಬರಿಗೈಲಿ ಬಂದ ಪತಿಯನ್ನು ಹೆಚ್ಚು

ತರುವಂತೆ ಪ್ರೋತ್ಸಾಹಿಸಲು ಅಲ್ಲಿ ನಿಲ್ಲಿಸಿಲ್ಲ. ಆತ ದಿನಕ್ಕಿಂತ ಹಿಡಿ ಹೆಚ್ಚು ತಂದುದೇ ಅವಳ ದೃಷ್ಟಿಯಲ್ಲಿ ಕ್ಷಮಿಸಲಾಗದು ತಪ್ಪು. ಆಕೆಯ ಮಾತನ್ನು ಕೇಳಿದ ಮಾರಯ್ಯ "ಬೇಡ ಲಕ್ಕಾ, ನಾವು ಬಡವರೆಂದು ಅಣ್ಣ ಇಂದು ಸ್ವಲ್ಪ ಹೆಚ್ಚಿಗೆ ಸುರಿಸಿದ್ದಾರೆ. ನಾನು ಅಲ್ಲಿ ಸುರಿದು ಬಂದರೆ ಏನೆಂದುಕೊಳ್ಳುವುದಿಲ್ಲ" .... ಪತಿಯ ಮಾತನ್ನು ಕೇಳುತ್ತ ಲಕ್ಕಮ್ಮ ತಾಯಿ ಸಿಡಿಮಿಡಿಗೊಳ್ಳುತ್ತಾಳೆ.

"ನಾವು ಬಡವರೆ? ಬಡವರೆ ಮಾರಯ್ಯ ಭಕ್ತಂಗೆ ಬಡತನವುಂಟೆ? ನಿತ್ಯಂಗೆ ಮರಣವುಂಟೆ? ಇಡೀ ಜಗವ ರಕ್ಷಿಸುವ ಲಿಂಗ ತಂದೆ ಇರುವಾಗ ನಮಗೆ ಬಡತನ ಎಲ್ಲಿ ಬರಬೇಕು. ಬಡತನ ಬರಬೇಕಾದರೆ ಆ ತಂದೆ ಸತ್ತಾಗ ಮಾತ್ರ ಬರುತ್ತದೆ. ಅಷ್ಟರಲ್ಲಿ ಬಡತನ ಎಂದರೇನು? ಬಡತನವಾದರೂ

"ಅಂಗಕ್ಕಲ್ಲದೆ ಮನಕ್ಕೆ ಬಡತನವುಂಟೆ ಅಯ್ಯಾ
ಬೆಟ್ಟ ಬಲ್ಲಿತ್ತೆಂದೊಡೆ ಉಳಿಯ ಮೊನೆಯಲ್ಲಿ
ಬಡತನವಿದ್ದಡೆ ಒಡೆಯದೆ
ಘನ ಶಿವಭಕ್ತರಿಗೆ ಬಡತನವಿಲ್ಲ
ಸತ್ಯರಿಗೆ ದುಷ್ಕರ್ಮವಿಲ್ಲ ಎನಗೆ ಮಾರಯ್ಯಪ್ರಿಯ
ಅಮರೇಶ್ವರ ಲಿಂಗ ಉಳ್ಳನ್ನಕ್ಕ ಯಾರ ಹಂಗಿಲ್ಲ ಮಾರಯ್ಯ
ಎನ್ನುತ್ತಾಳೆ ಲಕ್ಕಮ್ಮ.

ನಿಜ ಬಡತನ ಅಂಗಕ್ಕಷ್ಟೆ ಸೀಮಿತ. ಮನ ಶ್ರೀಮಂತಿಕೆ ಇರುವಾಗ ಬಡತನ ಬರಲು ಸಾಧ್ಯವೆ? ಬೆಟ್ಟ ದೊಡ್ಡದಾದರೂ ಉಳಿಯ ಮೊನೆಯಲ್ಲಿ ಬಡತನವಿದ್ದರೂ ಅದನ್ನು ಒಡೆಯದಿರುವುದು. ಭಕ್ತರಿಗೆಂದಿಗೂ ಬಡತನವಿಲ್ಲ ನಾವು ಧರಿಸುವ ಆಭರಣ ವಸ್ತ್ರಗಳಿಗೆ ಬಡತನ ಬರಬಹುದು ಅದರೆ ಮನ ಶ್ರೀಮಂತಿಕೆ ಆ ಬಡತನ ಎಲ್ಲಿಸಾಧ್ಯ. ಶ್ರೀಮಂತಿಕೆ ಇರುವಾಗ ಬಡತನದ ಧೂಳು ಕೂಡ ಸೋಂಕದು. ಇಷ್ಟಕ್ಕೆ ನಿಲ್ಲಲಿಲ್ಲ ಆ ತಾಯಿ ನುಡಿ.

ಆ ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ. ಚಿತ್ತಶುದ್ಧದಲ್ಲಿ ಕಾಯಕ ಮಾಡುವ ಸದ್ಭಕ್ತಂಗೆ ಎತ್ತ ನೋಡಿದೊಡತ್ತ ಲಕ್ಷ್ಮಿತಾನಾಗಿಪ್ಪಳು, ಎಂದುದನ್ನು ಕೇಳುತ್ತಾ ಕೇಳುತ್ತಾ ಮಾರಯ್ಯ ಮೂಕನಾಗಿ ನಿಂತ.

ಇಂದು ಶ್ರೀಮಂತರು ಬಡವರೆಂಬ ಕಂದಕಗಳನ್ನು ನಿರ್ಮಿಸಿಕೊಂಡು ಸಮಾಜದ ದುಸ್ಥಿತಿಗೆ ಕಾರಣರಾಗುತ್ತಿದ್ದೇವೆ. ಒಪ್ಪೊತ್ತಿನ ಗಂಜಿಗೂ ಗತಿಇಲ್ಲದ ಜನ, ಗಳಿಸಿದ್ದನ್ನು ವ್ಯಯ ಮಾಡಲು ಅಸಾಧ್ಯವಾಗಿ ಹಣದ ರಾಶಿಯ ಮೇಲೆ ಕುಳಿತ ಜನ ಎರಡು ವರ್ಗವನ್ನು ಕಾಣುತ್ತಿದ್ದೇವೆ.

ಬಡತನ ಇಂದು ಬೃಹದಾಕಾರದ ಸಮಸ್ಯೆ. ರಷ್ಯಾ ದೇಶದಲ್ಲೂ ಒಬ್ಬ ತಾಯಿ ತನ್ನ ಮಗುವನ್ನು ಸಾಕಲಾಗದೆ ಅನಾಥಾಶ್ರಮಕ್ಕೆ ಬಿಟ್ಟಿದ್ದಾಳೆಂದಮೇಲೆ ಅದರ ಭೀಕರತೆ ಅರಿವಾಗದಿರದು. ಒಮ್ಮೆ ನಾನು ರಸ್ತೆಯಲ್ಲಿ ಬರುವಾಗ ಒಬ್ಬ ತಾಯಿ ತನ್ನ ಮಗುವನ್ನು ಹೊಡೆಯುತ್ತಿದ್ದಳು. ತಾಯಿ ಮಗುವನ್ನು ಹೊಡೆಯುವುದು ಸಹಜ ಆದರೂ ಆಕೆ ಹೇಳುತ್ತಿದ್ದ ಮಾತು ಕೇಳಿ ಕಣ್ಣಲ್ಲಿ ನೀರುಬಂತು. ಪಾಪ ಮಗು ಹುಟ್ಟಿದಾಗಲೇ ಪತಿಯನ್ನು ಕಳೆದುಕೊಂಡು ಕಷ್ಟದಿಂದ ಮಗುವನ್ನು ಸಾಕುತಿದ್ದಾಳೆ. ಒಂದು ಹೊತ್ತು ಹೊಟ್ಟೆ ತುಂಬ ಊಟಮಾಡಲಾಗದಷ್ಟು ಬಡತನ. ಎರಡು ದಿನದಿಂದ ಉಪವಾಸ ಅಂದು ತನಗೆಂದು ಇಟ್ಟುಕೊಂಡಿದ್ದ ಅನ್ನವನ್ನು ಮಗ ಶಾಲೆಯಿಂದ ಬಂದು ತಿಂದು ಬಿಟ್ಟಿದ್ದ ಆಕೆಯು ಒಡಲಿನ ಹಸಿವು ತಾಳಲಾಗದೆ ಹುಟ್ಟಿದಾಗ ಅಪ್ಪನ್ನ ತಿಂದು ಕೊಂಡೆ. ಈಗ ನನ್ನ ಅನ್ನಾನು ತಿದ್ಕೊಂಡೆ ಎಂದು ಹೊಡೆಯುತ್ತಿದ್ದಳು. ಹಸಿವು ಆ ಬಡತನ ತಾಯಿಯ ಮಮತೆಯನ್ನು ದೂರ ಮಾಡಿತು.

ಈ ಅಸಮಾನತೆಗೆ ಕಾರಣ ಸಮಾಜದಲ್ಲಿ ಕಂಡು ಬರುವ ವರ್ಗಬೇಧ. ಇದನ್ನು ಹೋಗಲಾಡಿಸಲು ಅಂದು ಪ್ರಯತ್ನಿಸಿ ಸಫಲರಾಗಿದ್ದರು ಶರಣರು. ಅವರ ದೃಷ್ಟಿಯಲ್ಲಿ ಸಂಗ್ರಹಿಸುವುದು ಮಹಾ ತಪ್ಪು.

ಲಕ್ಕಮನ ಮಾತು ಕೇಳುತ್ತ ಕೇಳುತ್ತಾ ಮಾರಯ್ಯ ಹೇಳುತ್ತಾನೆ. ಹೋಗಲಿ ಲಕ್ಕ ಹೇಗೂ ಕಾಯಕ ಮಾಡಿ ತಂದಿರುವೆ ನಾಳೆಗಾದರೂ __... ಆಗ ಲಕ್ಕಮ್ಮ ಮಾತು ಮುಗಿಸುವ ಮುನ್ನವೆ ತನ್ನ ಬತ್ತಳಿಕೆಯಿಂದ ಮತ್ತೊಂದು ಬಾಣವನ್ನು ಎಸೆಯುತ್ತಾಳೆ .

ತಂದಿಳ್ಕುವ ಶಿವಂಗೆ ಬಡತನವೆ?: ‹‹ಇಂದಿಗೆಂತು ನಾಳಿಂಗೆಂತೆಂದು ಚಿಂತಿಸಲೇಕೆ?

ನಾಳಿಂಗೆಂದು ಸಂಗ್ರಹಿಸಿದರೆ ಆ ಸಂಗ್ರಹಿಸುವ ಭಾವಬಲಿಯುತ್ತದೆ. ಸಮಾಜದಲ್ಲಿ ಉಳ್ಳವರು ಇಲ್ಲದವರೆಂಬ ವರ್ಗಸೃಷ್ಟಿ ಆಗುತ್ತದೆ. ಸಮಾಜವಾದದ ಅಸ್ತಿತ್ವ ಕುಸಿಯುತ್ತದೆ. ಬಡತನದ ಒಡಲಿನ ಕೂಗಿಗೆ ಕೊನೆಇಲ್ಲವಾಗುತ್ತದೆ. ಬಡವ ಜೀವನದ ಆಶೆ ಕಳೆದುಕೊಳ್ಳುತ್ತಾನೆ. ಇಂದಿನ ಗಂಜಿಗೂ ಗತಿಯಿಲ್ಲದ ಸುಖದ ಸುಪ್ಪತ್ತಿಗೆಯಲ್ಲಿ ಮಲಗಿರುವ ಎರಡು ಗುಂಪಿನ ಜನಕಾಣುವುದು ಈ ಸಂಗ್ರಹ ಪ್ರವೃತ್ತಿಯಿಂದ.

ಇಂದು ಬಡವ ತನ್ನ ಬಡತನ ಪೂರ್ವಜನ್ಮದಕರ್ಮ ಎಂದು ಕೊರಗುವಂತಾಗಿದೆ. ಇಂದು ಅವನಿಗಿರುವಷ್ಟು ನೆಮ್ಮದಿ ಸಿರಿವಂತನಿಗೆಲ್ಲಿದೆ? ಹೆಚ್ಚು ಸಂಪತ್ತನ್ನುಗಳಿಸುತ್ತ ಹೋದಷ್ಟು ನೆಮ್ಮದಿ ಇಲ್ಲವಾಗುತ್ತದೆ. ಇಲ್ಲಿ ಒಂದು ಕಥೆ ನೆನಪಾಗುತ್ತಿದೆ.

ಒಬ್ಬ ಬಡವ ಜೀವನದಲ್ಲಿ ಹಣವಿಲ್ಲ ನೆಮ್ಮದಿ ಇದೆ. ಆತ ಪರಮಹಂಸರ ಬಳಿಗೆ ಬಂದು ಕೇಳಿದ "ಗುರುದೇವ ನನ್ನಲ್ಲಿ ನೆಮ್ಮದಿ ಇದೆ ಹಣವಿಲ್ಲ. ಹಣವಿಲ್ಲದ ನೆಮ್ಮದಿ ಬದುಕು ಯಾರಿಗೆ ಬೇಕು. ಬಡತನ ಸಾಕಾಗಿದೆ. ಹಣವಿದ್ದರೆ ಎಲ್ಲವನ್ನು ಕೊಂಡುಕೊಳ್ಳಬಹುದು ಎಂದ ಹೇಳಿದ. ಪರಮಹಂಸರು ಆಗಲಿ ಮನೆಗೆ ಹೋಗು ಸಿರಿ ಬೇಕುತಾನೆ. ಮನೆಗೆ ಹೋಗು ಎಂದರು. ಮನೆಗೆ ಬಂದು ನೋಡಿದ ಅತುಳ ಸಂಪತ್ತು ನಿಜಕ್ಕೂ ತಾನೀಗ ಸಂತೃಪ್ತಿ ಎಂದು ಭ್ರಮಿಸಿದ. ಒಂದೆರಡು ವರುಷ ಕಳೆಯಿತು. ಜೀವನದಲ್ಲಿ ಹಣವಿದೆ ನೆಮ್ಮದಿ ಇಲ್ಲ ಬದುಕು ಬೇಸರವಾಯಿತು. ಮನೆಯಲ್ಲಿ ರೋಗ ರುಜಿನ ನೆಮ್ಮದಿ ಇಲ್ಲವಾಯಿತು. ಹಿಂದಿನ ದಿನ ಸುಖದ ದಿನವಾಗಿಕಂಡಿತು. ಮರಳಿ ಪರಮಹಂಸರ ಬಳಿಗೆ ಹೋದ. ಅವರು ಕೇಳಿದರು ಮಗು ಈಗ ಹಣದಿಂದ ಸಂತೃಪ್ತನಾಗಿ ಇರುವೆಯಲ್ಲವೆ? ಎಂದು ಆತ ತಲೆ ತಗ್ಗಿಸಿದ. ಹೇಳಿದ ಗುರುದೇವ ಅದು ನನ್ನ ಭ್ರಮೆ. ಅಂದಿದ್ದ ನೆಮ್ಮದಿ ಇಂದಿಲ್ಲ. ಹಿಂದಿನ ರೀತಿಯಲ್ಲಿ ಇದ್ದರೆ ಸಾಕು. ಆಗ ಪ್ರೀತಿ ವಾತ್ಸಲ್ಯ ಸಾಗರ ತುಂಬಿತ್ತು. ಇಂದು ಅದೆಲ್ಲ ಕನಸು. ನನಗೆ ಬಡತನವೇ ಇರಲಿ ಅದಿದ್ದಲ್ಲಿ ನೆಮ್ಮದಿ ಇರುತ್ತದೆ. ಎಂದು ಕೇಳಿಕೊಂಡ.

ಕಥೆ ಏನೇ ಇರಲಿ. ಭೂಮಿಯೆ ಹಾಸಿಗೆ ಆಕಾಶವೇ ಹೊದಿಕೆ ಹೊಂದಿರುವ ವ್ಯಕ್ತಿಗಿರುವಷ್ಟು ನೆಮ್ಮದಿ. ಸುಖದ ಸುಪ್ಪತ್ತಿಗೆಯಲ್ಲಿ ಮಲಗಿರುವವನಿಗೆ ಇರುವುದಿಲ್ಲ.

ಅದೇನೆ ಇರಲಿ ಜಗತ್ತಿನಲ್ಲಿ ಯಾವುದು ಶಾಶ್ವತವಲ್ಲ. ಸಿರಿಯು ಬಡತನವವು ಸ್ಥಿರವಲ್ಲ. ರಾತ್ರಿ ಹಗಲಿದ್ದಂತೆ. ಎಷ್ಟೇ ಚಕ್ರವರ್ತಿಗಳು ಆಳಿದರೂ ಆದರೆಅವರಾಗಲಿ ಯಾರೇ ಆಗಲಿ ಏನನ್ನು ಕೊಂಡೊಯ್ಯಲಾಗಲಿಲ್ಲ. ಆ ದೇವರ ಲೋಕದಲ್ಲಿ ಎಲ್ಲರೂ ಒಂದೆ.

ಪ್ರಕೃತಿ, ಪ್ರಾಣಿ, ಪಕ್ಷಿ, ಸಂಕುಲದಲ್ಲಿ ಈ ಸಿರಿವಂತಿಕೆ ಬಡತನದ ಹಂಗಿಲ್ಲ. ಅದ್ದರಿಂದ ಅವು ತೃಪ್ತಿ. ಆದರೆ ಈ ಭಿನ್ನತೆ ಮಾನವನಲ್ಲಿ ಮಾತ್ರ. ಇದು ಹೋಗದ ಹೊರತು ಸಂತೃಪ್ತಿ ನೆಲಸದು. ಅದ್ದರಿಂದ ಬಡವ ತಾನು ಬಡವ ಎಂಬ ಕೀಳರಿಮೆ ಬೆಳೆಸಿಕೊಳ್ಳದೆ ಸಿರಿವಂತರೂ ತಾನು ಮೇಲೆಂಬ ಭಾವನೆ ತಾಳದೆ ಇಬ್ಬರಲ್ಲೂ ಪ್ರೀತಿ ವಾತ್ಸಲ್ಯದ ಸಲೆ ಹರಡಿದಾಗ ಸಮಾಜದ ಬಿನ್ನತೆ ಹೋಗುತ್ತದೆ.

ಬಡತನವೂ ಸಿರಿತನವೂ ಯಾವುದೇ ಇರಲಿ
ಅದರಿಂ ಸಂತಸ ಪಡುವ ಮನವೆಮಗಿರಲಿ
ಬಂದಂತೆ ಮರಳುವ ಜನರುನಾವೆಲ್ಲ
ನಡುವೆ ಬಿನ್ನತೆಗೆ ಅಂತ್ಯವಿರಲಿರಲಿ

ಎಂಬ ಭಾವ ತಾಳಿದಷ್ಟೆ ಅಲ್ಲ ಶರಣರ ನುಡಿಗಡಣಗಳಲ್ಲಿನ ತತ್ತ್ವ ಅರಿತು ಆಚರಿಸಿದಾಗ ಈ ಭಿನ್ನತೆ ನಾಶವಾಗುತ್ತದೆ. ಭೂಮಿಯೇ ಸ್ವರ್ಗವಾಗುತ್ತದೆ. ನಾಲ್ಕು ದಿನದ ಬಾಳು ಮಘ ಮಘಿಸುತ್ತದೆ.

ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿಕಾಳಿದಾಸ", ಅಥಣಿ. (ಬೆಳಗಾವಿಜಿಲ್ಲೆ)

**ವಚನ ಸಾಹಿತ್ಯ ಪುಣ್ಯ ಗಂಗಾಪ್ರವಾಹ** [158]

**ಡಾ|| ಫ.ಗು. ಹಳಕಟ್ಟಿ:** "ಅಂದಿನಾ ವಚನ ವಾಙ್ಮಯ
ಮಹಾವೃಕ್ಷದಾ ಅಮೃತಫಲಗಳನು
ಇಂತೆಮಗೆ ನಾಡಿಂಗೆ ಭಾರತಿಗೆ
ಧಾರಿಣಿಗೆ ಚತುರ್ಮೂರ್ತಿಗಳು
ತಂದಿತ್ತುಣಿಸಿದರು ನೋಡಾ!
ಆ ಚತುರ ಚತುಷ್ಪುಣ್ಯಮೂರ್ತಿಗಳಲ್ಲಿ ಪ್ರಥಮರಾರೆಂದೊಡೆ:
ಮಹಾಶರಣ ಶಿವಕಾರ್ಯನಿರತ ಡಾ.ಫ.ಗು.ಹಳಕಟ್ಟಿ, ನೋಡಾ!
ಬಸವಾದಿ ಪ್ರಮಥರಾ ಅನುಭವಾಮೃತಮೆನೆ ಆ ಪುರಾತನರಾ
ಸಕಲವಚನಗಳ ಕಲೆಹಾಕಿ, ಪರಿಷ್ಕರಿಸಿ, ಶೋಧಿಸಿ,
ಅವಿಶ್ರಾಂತ ಶ್ರಮವಹಿಸಿ, ಶಿವಕಾರ್ಯವೆಂದು ಭಾವಿಸಿ,
"ಶಿವಾನುಭವ" ಮಾಸಪತ್ರಿಕೆಯಿಂ ಧರ್ಮಪ್ರಚುರಗೊಳಿಸಿ,
ನೂರಾರು ವಚನಶಾಸ್ತ್ರಗ್ರಂಥಗಳ ಭಕ್ತಿಯಿಂ ಪ್ರಕಟಿಸಿ,
ಲೋಕಕ್ಕೆ ವಚನ ವಾಙ್ಮಯ ವೃಕ್ಷದಾ
ಅಮೃತ ಫಲಗಳನಿತ್ತು ಅತ್ಯಂತ ಪುಣ್ಯಭಾಗಿಗಳಾದರು ನೋಡಾ!
"ವಚನಶಾಸ್ತ್ರಪಿತಾಮ" ಪೂಜ್ಯ ಹಳಕಟ್ಟಿ
ಧರೆಗೆ ಹರನಟ್ಟಿದ ಅಮೃತ ರಸಗಟ್ಟಿ!
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ!"

**ಪ್ರೊ.ಶಿ.ಶಿ. ಬಸವನಾಳ್:** [159]

"ದ್ವಿತೀಯ ಪುಣ್ಯಪುರುಷ ಮಹಾನ್ ಚರಿತ
ಬಸವ ಭಕ್ತಿ ರಸಭರಿತ ಪ್ರೊ. ಬಸವನಾಳ್ ಖ್ಯಾತ
ಶ್ರೀಬಸವಣ್ಣನವರ ಷಟ್‌ಸ್ಥಲ ವಚನಂಗಳನು ಮತ್ತೆ
ಮಹಾಕಾವ್ಯಗಳೆನೆ ಚೆನ್ನಬಸವಪುರಾಣ, ಶಬರಶಂಕರ ವಿಳಾಸ,
ಪ್ರಭುಲಿಂಗಲೀಲೆ, ಬಸವಣ್ಣನವರ ಹೆಚ್ಚಿನ ವಚನಗಳು
ಇತ್ಯಾದಿ ಕೃತಿರತ್ನಂಗಳನು ಮೇಧಾವಿಯನೆ ಪರಿಷ್ಕರಿಸಿ
ಮುದ್ರಿಸಿ ಮೇದಿನಿಯ ಭಕ್ತತತಿಗೆ ನೀಡಿ,
ಮಹೋಪಕಾರ ಗೆಯ್ದರು ನೋಡಾ!
ಇಂತು ಬಸವನಾಳ್ ಬಸವನ ಆಳು ಕೇಳಾ!
ಶ್ರೀಶೈಲ ಮಲ್ಲಿಕಾರ್ಜುನ"

ಶ್ರೀ ಚೆನ್ನಮಲ್ಲಿಕಾರ್ಜುನ: [160]

"ತೃತೀಯ ಪುಣ್ಯ ಚರಿತ ಶರಣಸಂಪ್ರೀತ
ಶಿರಾಳ (ಶಿರಿಯಾಳ) ಕೊಪ್ಪ ಚೆನ್ನಮಲ್ಲಿಕಾರ್ಜುನರ್
ಮೈಸೂರು "ಸದ್ಧರ್ಮದೀಪಿಕೆ" ಮಾಸಪತ್ರ ಪ್ರಕಾಶಕರ್
ಮಮಪಿತೃಸಮಾನರೆನೆ ಮಹಾನುಭಾವಿಗಳಿವರ್
ಸಕಲ ಜೀವರಾಶಿಗೆ ಲೇಸನೆ ಬಯಸುವರು ನೋಡಾ.
ಮಹಾದೇವಿಯಕ್ಕಗಳ ವಚನಾರ್ಥ, ಪ್ರಭುದೇವರ ಮಂತ್ರಗೋಪ್ಯ
ನಿರಾಳ ಗುರುಸ್ತೋತ್ರ, ಸಿದ್ಧೇಶ್ವರ ವಚನ ಮೇಣ್
ಪಂಚಾಚಾರ್ಯರ ಚರಿತ್ರೆ ಮುಖ್ಯಭಾಗವೆನೆ
"ರೇವಣಸಿದ್ಧರು ಉದ್ಗ್ರಂಥ ಸಂಶೋಧನಾತ್ಮಕ
ಕೃತಿರತ್ನಂಗಳ ಕಸ್ತೂರಿ ಕನ್ನಡತಾಯಿಗೆ ನೀಡಿ
ಲಿಂಗಾಯತ ಸಮಾಜೋದ್ಧಾರಗೆಯ್ದು
ಭಾರತದ ಕೀರ್ತಿ ಬೆಳೆಸಿದರು ನೋಡಾ!
ಇಂತಿವರ ಕ್ರಿಯಾನಿಷ್ಠೆ ಗುರುಭಕ್ತಿ, ಪ್ರಸಾದಭಾವನೆ
ಭಕ್ತಜನಕ್ಕಾದರ್ಶವಾಗಿಪ್ಪವು ನೋಡಾ!
ಶ್ರೀಚೆನ್ನಮಲ್ಲಿಕಾರ್ಜುನರು ಶರಣ ಸಂಪ್ರೀತರಲ್ತೆ ಹೇಳಾ?
ಕಾರುಣ್ಯಸಿಂಧು! ಧರ್ಮಬಂಧು! ಶ್ರೀಶೈಲಮಲ್ಲಿಕಾರ್ಜುನ."

"ರೇಚಣ್ಣನಪರಾವತಾರಿ" ಡಾ.ಆರ್.ಸಿ. ಹಿರೇಮಠ: [161]

"ಚತುರ್ಥಮೂರ್ತಿ ಪ್ರಬುದ್ಧವ್ಯಕ್ತಿ ಕುಲಪತಿ ಪುಣ್ಯಕೀರ್ತಿ
ಆತ್ಮಬಂಧು ಪ್ರೇಮಸಿಂಧು ಡಾ.ಆರ್.ಸಿ. ಹಿರೇಮಠ
ಕಾವ್ಯಲೋಕ ಬೆಳಗಿಪ ಚಂದ್ರ! ವಚನವಾರಿಧಿ ನಾಗೇಂದ್ರ!
ಸಕಳವಿದ್ಯಾಸಾಂದ್ರ! ವಿಶ್ವಸಾಹಿತ್ಯವಿಶಾರದ ನೆನಲಿವರ್
ಸಂಪಾದಿಸಿರ್ದ ಚೆನ್ನಕೃತಿ ರತ್ನಗಳು:
ಚೆನ್ನಬಸವಣ್ಣನವರ ವಚನಗಳು, ಸಿದ್ಧರಾಮೇಶ್ವರ ವಚನಗಳು,
ಶಿವಶರಣೆಯರ ವಚನಗಳು (ಸಮಗ್ರಸಂಪುಟ) ಬಸವಣ್ಣನವರ ವಚನಗಳು,
ಮಹಾದೇವಿಯಕ್ಕನ ವಚನಗಳು ನೀಲಮ್ಮನ ವಚನಗಳು
ಮತ್ತೆ ಲಿಂಗಮ್ಮನ ವಚನಗಳು, ಇಪ್ಪತ್ತೇಳುಶಿವಶರಣೆಯರ ವಚನಗಳು,
ಅಮುಗೆ ರಾಯಮ್ಮನ ವಚನಗಳು, ಮತ್ತು ಅಕ್ಕಮ್ಮನ ವಚನಗಳು,
ಗುಮ್ಮಳಾಪುರದ ಸಿದ್ಧಲಿಂಗದೇವರ 'ಶೂನ್ಯ ಸಂಪಾದನೆ'
ಶಿವಗಣಪ್ರಸಾದಿ ಮಹಾದೇವಯ್ಯಗಳ 'ಶೂನ್ಯಸಂಪಾದನೆ'
ಬ್ರಹ್ಮಾದ್ವೈತ ಸಿದ್ಧಾಂತ ಷಟ್‌ಸ್ಥಲಾಭರಣ, ಮುಕ್ತಿಕಂಠಾಭರಣ,
ಲಿಂಗ ಚಿದಮೃತ ಬೋಧೆ, ವೀರಶೈವ ಚಿಂತಾಮಣಿ,

ವಿಶೇಷಾನುಭವ ಷಟ್‌ಸ್ಥಲ, ಸಕಲ ಪುರಾತನರ ವಚನಗಳು,
ಇಂತೀ ಬೃಹದ್ ಗ್ರಂಥಗಳ ಪ್ರಕಟನೆಯಲ್ಲದೆ, ಮತ್ತೆ ವಚನಸಾಹಿತ್ಯ
ಸಂಶೋಧನೆಗೆ ಸಹಾಯಕ ಕೃತಿಗಳಿನೆ-'ಷಟ್‌ಸ್ಥಲಪ್ರಭೆ' (ಸ್ವರಚಿತ)
ರಾಜಶೇಖರ ವಿಳಾಸ ಮೇಣ್ ಸೋಮನಾಥ ಚಾರಿತ್ರ, ತ್ರಿಷಷ್ಟಿಪುರಾತನಚಾರಿತ್ರ,
ಬಸವರಾಜ ವಿಜಯಂ ಮಹಾಚಂಪೂಕಾವ್ಯರತ್ನ 'ಮಹಾಕವಿ ಷಡಕ್ಷರಿ ಕೃತ'
ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ (ಭಾಗ-೧೨)
ಹರಿಹರ ದೇವಕೃತ ಪುರಾತನರ ಆರು ರಗಳೆಗಳು, ಇಂತೀಮಹಾ
ಕೃತಿರತ್ನಗಳೆಲ್ಲ ಮುದ್ರಿತವಾದುವು ಶಾಶ್ವತವಪ್ಪಂತೆ ನೋಡಾ !
ಈ ಮಹತ್ಕಾರ್ಯಕ್ಕೆ ಸಪ್ತ ಸಹಸ್ರ ಹಸ್ತಪ್ರತಿಗಳು "ಕರ್ನಾಟಕ ವಿಶ್ವವಿದ್ಯಾಲಯ"
ಗ್ರಂಥ ಭಂಢಾರದಲ್ಲಿ ಸಂಗ್ರಹವಾದುವು ತಾಳೆಗರಿ ಪ್ರತಿ ಮೊದಲಾದವು ನೋಡಾ !
ಇಂದು ಎಮ್ಮ ಆತ್ಮ ಬಂಧುವಿನ ಮಹಾಮೇರು ಸದೃಶ ಸಾಹಸದಿಂದೆ-
ಸಪ್ತ ಸಾಹಿತ್ಯ ಸಾಗರಂಗಳು ಸೃಷ್ಟಿಗೆ ಉಕ್ಕಿ ಬಂದಂತಾಯಿತ್ತು ನೋಡಾ !
ಇಂತು ಅಣ್ಣ "ರೇಚಣ್ಣನಪರಾವತಾರಿ" ಶಿವಸಾಹಿತ್ಯ
ಶಿವಂಗೆ ಪ್ರಿಯವೆನಿಸಿತ್ತು ! ಕಾಣಾ, ಶ್ರೀಶೈಲಮಲ್ಲಿಕಾರ್ಜುನ!"

ಪಂಚಮುಖಿವಚನಕಾರರು: **ಇಂದಿನ ವಚನಕಾರರು** [162]

" ಶ್ರೀ.ಜ.ಚ.ನಿ. ಹಾಡುತಿರ್ಪರು-ಶ್ರೀ ವಿಡುವಾವಿಡಿ
ಸೂರ್ಯ ಸಿಂಹಾಸನಾಧೀಶ್ವರ ವಚನಂಗಳನು ನೋಡಾ !
"ಕಾವ್ಯಾನಂದ" ಪಾಡುತ್ತಿಹರು-ಸ್ವತಂತ್ರಧೀರ
ಸಿದ್ಧೇಶ್ವರ ವಚನಂಗಳನು ನೋಡಾ !
'ಕನ್ನಡಕವಿಕಾಳಿದಾಸ' ಹಾಡುತ್ತಿಹುದು-ಶ್ರೀಶೈಲಮಲ್ಲಿಕಾರ್ಜುನ
ವಚನಂಗಳನು ನೋಡಾ !
'ಗಮಕಕಲಾನಿಧಿ' ಹೇಳುತ್ತಿಹರು-ರಾಮೇಶ
ವಚನಂಗಳನು ನೋಡಾ !
'ಶ್ರೀಸಂಗಮೇಶ ಹೊಸಮುನಿ' ಹೇಳುತಿರ್ಪುದು ಶ್ರೀಸಂಗಮನಾಥನ
ವಚನಂಗಳನು ನೋಡಾ !
ಇಂತು ಪರಶಿವನ ಪಂಚಮುಖಗಳೆಂಬಂತೆ
ಪಂಚಕಲಾನಿಧಿ ಸ್ವರೂಪರಾದ ವಚನಕಾರರಿವರು
ಶ್ರೀಬಸವಾದಿ ಶರಣರನುಯಾಯಿಗಳಾಗಿ
ಇಂದಿಳೆಗೆ ವಚನಾಮೃತ ಫಲಗಳ ನೀಡುತಿಪ್ಪರು
ಕಾಣಾ, ಶ್ರೀಶೈಲಮಲ್ಲಿಕಾರ್ಜುನ !"

"ಶಿವಸಾಹಿತ್ಯ ಸೃಷ್ಟಿಯಲಿ ಅದ್ವಿತೀಯ ವ್ಯಕ್ತಿಯೆನೆ
ಡಾ. ಶ್ರೀ ಜ.ಚ.ನಿ. ಋಷಿಯೋರ್ವರೆ ನೋಡಾ!
ಸರಲಹೃದಯದ ಸ್ವಾಮೀಜಿ ಪ್ರೇಮಮಯಿ ಸದುವಿನಯ ನೋಡಾ!
ಅಮಮ! ಅಂದು ಲೋಕಪೂಜ್ಯನೆನೆ
ಅಗಸ್ತ್ಯ ಮಹರ್ಷಿ ತಾ ಸಮುದ್ರಮ-
ನಾಪೋಶನಂ ಗೆಯ್ದಂತೆ!
ಇಂದು ಶಿವಾಗಮಸಾಹಿತ್ಯ ಕಲ್ಪತರು ಶಿವಕವಿ
"ಶ್ರೀ ಜ.ಚ.ನಿ. ಪ್ರಬುದ್ಧ ಶಿವಜ್ಞಾನಿ ಶಿವಾನುಭಾವಿ
ಶಿವಯೋಗಿ ಸಾರ್ವಭೌಮ. ನಾಲ್ಕುನೂರು ಕೃತಿರತ್ನ ಕವಿಭೀಮ
ಶ್ರೀಮದ್ ಜಗದ್ಗುರು ಶ್ರೀಅಭಿನವ ಪಂಡಿತಾಚಾರ್ಯ
ಕನಕಸೂರ್ಯ ಸಿಂಹಾಸನಾಚಾರ್ಯ. 'ಗುರುಕವಿವರ್ಯ
ಕಲಿಯುಗದ ಕವಿ ಕಾಮಧೇನು ಕವಿಗುರುಭಾನು !
ಶಿವಾಗಮ ಸಾಹಿತ್ಯಸಾರ್ವಭೌಮ ಭಾರತೀಯ ತತ್ತ್ವಜ್ಞಾನಧಾಮ
ಅಭಿನವ ಅಲ್ಲಮಪಭು ತೇಜಸ್ತೇಜಿ ಬ್ರಹ್ಮ' ವಾಙ್ಮಯಪರಬ್ರಹ್ಮ
ವಿಶ್ವಧರ್ಮತತ್ತ್ವಜ್ಞಾನ ಪೂರ್ಣಚಂದ್ರ ಲಿಂಗತಪಸ್ತೇಜಸ್ತೇಜಸಾಂದ್ರ
ನೂರು-ಹತ್ತೊಂಬತ್ತು ತೊಂಬತ್ತರಲ್ಲಿ ಕನ್ನಡಕವಿಕಾಳಿದಾಸ ಕವಿಯಾಲಯಮದಿ
ದಯಮಾಡಿಸಿ ಶಿವಯೋಗಿ ಸಾಮ್ರಾಜ್ಯದಲ್ಲಿ ನಲಿನಲಿದು ಪೂಜಾನಂದ ಪ್ರಸಾದವನಿತ್ತು
ದಿನವೆರಡು ನಿಂದು ಸರ್ವರಿಗೂ ಮಂಗಲಾಶೀರ್ವಚನವನಿತ್ತು ರಕ್ಷಿಸಿದ ಗುರುವೆ ಶರಣ
ವೀರಶೈರ [ಲಿಂಗಾಯುತ] ಷಟ್‌ಸ್ಥಲತತ್ತ್ವಸಾಗರ
ದುದಕಮನೆಲ್ಲಮಂ, ತಮ್ಮಸ್ವಾನುಭಾವ.ಜ್ಞಾನಗಳೆಂಬೆರಡು-
ಹಸ್ತಗಳಿಂದೆತ್ತಿ ಕುಡಿದು ತೃಪ್ತಿಪಡೆದಿಪ್ಪರು ನೋಡಾ !
ಇಂತೀ ಪರಮ ಪೂಜ್ಯ ವಿಭೂತಿ ಪುರುಷರಪ್ಪಗಳ್ ತೃಪ್ತಿಹೊಂದಿರ್ದ ಪ್ರಸಾದಮಂ
ಲೋಕಕ್ಕೆ ಕರುಣಿಸಿ ಕಲ್ಯಾಣಗೆಯ್ದಿಹರು ನೋಡಾ !
ಅಂತೆಯೆ ಸಂತತಂ ಮನುಕುಲಕೆ ಸ್ವಾಮೀಜಿ ಧರ್ಮಬೋಧನೆಗೆಯ್ಯುತಂ
ಸಾಹಿತ್ಯ ಮೃತಯಂ ನೀಡುತಂ ಕಲ್ಯಾಣಗೆಯ್ಯುತಿಹರು ನೋಡಾ !
'ಕನ್ನಡ ಕವಿಕಾಳಿದಾಸಂ'ಗೆ ಸಹಸ್ರಕಾಲ ಬೆಳ್ಗಿಂದು
ಶ್ರೀಜಗದ್ಗುರುಗಳು ನಲ್ವರಕೆಯ ನಿತ್ತುಮತ್ತೆ
ತಮ್ಮೆಲ್ಲ ಶಿವಸಾಹಿತ್ಯ ತ್ರಿಶತ ಕೃತಿ ಕುಸುಮಂಗಳಂ
ಹಸನ್ಮುಖ ದುಂಬಿ ನೀಡಿಹರು ನೋಡಾ !
ಇಂತು ಶ್ರೀ ಜ.ಚ.ನಿ. ಕವಿಕಲಾಪ್ರೇಮಿ !
ಭೂಮಿ ತೂಕದ ಪೂಜ್ಯ ಸ್ವಾಮಿ !
ಕಾಣಾ, ಶ್ರೀಶೈಲಮಲ್ಲಿಕಾರ್ಜುನ' !

# ಶರಣ ಸಿದ್ಧಾಂತ ಮತ್ತು ಮೇದಾರಕೇತಯ್ಯ

ಡಾ|| ಬಿ. ಎಸ್. ಸ್ವಾಮಿ, 201, 7ನೇ 'ಎ' ಮುಖ್ಯ ರಸ್ತೆ, ಆರ್. ಪಿ. ಸಿ. ಲೇ ಔಟ್,
ವಿಜಯನಗರ ಪೂರ್ವ, ಬೆಂಗಳೂರು–40

ಹನ್ನೆರಡನೆಯ ಶತಮಾನದ ಶ್ರೇಷ್ಠ ವಚನಕಾರರು ಹಾಗೂ ಶರಣರಸಾಲಿನಲ್ಲಿ ಮೇದಾರ ಕೇತಯ್ಯನೂ ಸಹ ಒಬ್ಬ. ಈತ ಶಿವಾನುಭವಿ, ಬಿದಿರು ಬುಟ್ಟಿಗಳನ್ನು ಮಾಡಿ ಇದರ ಕಾಯಕದೀದ ದಾಸೋಹನಡೆಸಿ ಪವಿತ್ರ ಜೀವನವನ್ನು ನಡೆಸಿಕೊಂಡು ಹೋಗುತ್ತಿದ್ದನು. ವೀರಶೈವ ತತ್ತ್ವವನ್ನು ಅನುಸರಿಸಿ ಜನರಿಗೆ ಬೋಧಿಸುವ ಶರಣ ಸಿದ್ಧಾಂತವನ್ನು ಪಸರಿಸಿದವ. ಈತನ ಹನ್ನೊಂದು ವಚನಗಳು ಉಪಲಬ್ಧವಾಗಿವೆ ಇದನ್ನು ಪ್ರೊ. ಎಸ್. ಎಸ್. ಭೂಸರೆಡ್ಡಿ ಹಾಗೂ ಪ್ರೊ. ಶ್ರೀಮತಿ ಎಸ್. ಎಸ್. ಮಟ್ಟಿ ಅವರು ಸಂಪಾದಿಸಿದ್ದಾರೆ. ಈ ವಚನಗಳಲ್ಲಿ ಶರಣ ಸಿದ್ಧಾಂತ ವೀರಶೈವ ತತ್ತ್ವಗಳ ಸಾರಸಂಗ್ರಹವಾಗಿವೆ.

ಸ್ಥೂಲ, ಸೂಕ್ಷ್ಮ, ಕಾರಣಗಳಿಂದದೊಡಗೂಡಿದ ಈ ಶರೀರ ಆಣವ, ಮಾಯಾ ಕಾರ್ಮಿಕ, ಮಲಗಳಿಂದ ಆವೃತಗೊಂಡಿದೆ. ಲಿಂಗಾಂಗ ಸಂಬಂಧದಿಂದ ಅವುಗಳನ್ನು ಸ್ವಚ್ಛಮಾಡಿ ಒಂದೇ ಜನ್ಮದಲ್ಲಿ ಮುಕ್ತಿ ಪಡೆಯುವ ಸ್ವರೂಪವನ್ನು ಒಂದು ವಚನದಲ್ಲಿ ಮೇದಾರ ಕೇತಯ್ಯ ನಿರೂಪಿಸಿದ್ದಾನೆ.

ಮತ್ತೆ ಕೆಲವು ವಚನಗಳಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ತೀರ್ಥ, ಮುಂತಾದವುಗಳ ಮಹತ್ವವನ್ನು ತಿಳಿಸುತ್ತಾನೆ ಒಂದೇ ದೇವರ ಉಪಾಸನೆಯನ್ನು ಎತ್ತಿ ಹಿಡಿಯುತ್ತಾನೆ. ಭಕ್ತನಿಗೆ ಸುಖ-ದು:ಖ ಎರಡೂ ಒಂದೇ ಬಡತನ-ಸಿರಿತನ ಎರಡೂ ಒಂದೇ. ಗುರು-ಲಿಂಗ ಜಂಗಮ, ರುದ್ರಾಕ್ಷಿ, ಮಂತ್ರದಿಂದ ಪೂಜೆ ಪಾದೋದಕ ಪ್ರಸಾದ ಪಡೆಯುವುದೇ ಶರಣರ ಗುರಿ. ಇವುಗಳೇ ಅಷ್ಟಾವರಣ ಇವು ಒಂದಕ್ಕೊಂದು ಪೂರಕ ಎನ್ನುತ್ತಾನೆ. ಈ ವಚನಗಳಿಂದ ಮೇದಾರ ಕೇತಯ್ಯಶರಣ ತನ್ನ ನಿಜಜೀವನದಲ್ಲೂ ಅಷ್ಟಾವರಣ, ಸಂಪನ್ನನಾಗಿದ್ಧ ಎಂಬುದು ವ್ಯಕ್ತವಾಗುತ್ತದೆ.

ಯಾವುದನ್ನೇ ಆಗಲೀ ಕೇತಯ್ಯ ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡಬೇಕೆಂದು ಒಂದು ವಚನದಲ್ಲಿ ಸಾರಿದ್ದಾನೆ.

ಮೊದಲ ಹುಸಿ ಲಾಭ ದಿಟವೇ ?
ನಿರೀಕ್ಷಣೆಯಿಲ್ಲದೆ ಪರೀಕ್ಷೆಯುಂಟೇ ?
ಈ ಅವಸರದಂಗವ ಗೌರವೇಶ್ವರ ಲಿಂಗ ನೀನೇ ಬಲ್ಲೆ ||

ಮತ್ತೊಂದು ವಚನದಲ್ಲಿ "ಮೌಲ್ಯವಿಲ್ಲದಿರಲು ಉದ್ಧಮುನ್ನವೇ ಇಲ್ಲ, ದೃಷ್ಟಿ ಇಲ್ಲದಿರಲು ದೃಶ್ಯದ ವಿವರಣೆ ಮೊದಲೇ ಇಲ್ಲ ಎಂಬತೆ ಗುರುವಿನ ಉಪದೇಶ ಇಲ್ಲದಿರಲು ಲಿಂಗವೆಂಬ ಕುರುಹು ಇಲ್ಲ. ಇದನರಿಯದೇ ನುಡಿವ ಬರಿದು ಭಕ್ತ ವೇಷದ ಮಾತುಗಳ ಸಲ್ಲವಿಟ್ಟಿಹರು ಜ್ಞಾನಿಗಳು."

ಏಕಾಗ್ರತೆ, ಆತ್ಮ ಸಂಯಮ, ದೃಡ ನಿಷ್ಠೆ ಪರಿಪಕ್ವಗೊಂಡರೆ ಲಿಂಗ ಸಾಕ್ಷಾತ್ಕಾರವಾಗುತ್ತದೆ. ಇಂದ್ರಿಯಗಳ ಜಯಿಸಿದವನೆಂದರೆ ಅವು ಕಾಮನ ಪಂಚ ಬಾಣಗಳಾಗಿರುವುವು. ಈ ಕಾಮ ವಿಕಾರವನ್ನು ಜಯಿಸಿದವನೆಂದರೆ ಅವು ಕಣ್ಣಿನಲ್ಲಿ ಸ್ತ್ರೀಯರನ್ನು ನೋಡಿ ಬಯಕೆಯಾದ ಕಾರಣ ಕಣ್ಣುಗಳ ಲಾಭ ಎನ್ನಿಸಿತು. ಭಿನ್ನ ದೃಗ್ವಿಷಯಗಳ ನಷ್ಟವ ಮಾಡಿ ಲಿಂಗ ಸೃಷ್ಟಿಯಾಗಿ ಅಳವಡಿಸಿಕೊಂಡಲ್ಲದೆ ಲಿಂಗ ಶರಣರ ಪಡೆಯಬಾರದು. ಅವು ಕಾಯ ಸ್ವರೂಪರಾದ ಶರಣರಿಗಲ್ಲದೆ ಜಡ ಕಾಯದ ವರ್ತನೆ ಉಳ್ಳವರಿಗೆ ದೊರೆಯದೇನು ?

ಪ್ರಾಣಲಿಂಗಿ ಸ್ಥಲದಲ್ಲಿ ಲಿಂಗ, ಜಂಗಮ, ಸ್ಥಲಗಳಲ್ಲಿ ಪ್ರಭುದೇವರು ಬಸವಣ್ಣನವರನ್ನು ಕಂಡು ಬದುಕಿದನೆಂದು ಮತ್ತೊಂದು ವಚನದಲ್ಲಿ ನಿವೇದಿಸಿಕೊಳ್ಳುತ್ತಾನೆ.

ಅಂಗಾಂಗಗಳನ್ನೆಲ್ಲಾ ಲಿಂಗಾಂಗಗಳಾಗಿ ಪರಿವರ್ತಿಸಿಕೊಂಡ ಆತನ ದೇಹ ಲಿಂಗಮಯ. ಅಷ್ಟಾವರಣ ಸಂಪನ್ನನಾದ ಈತ ಒಂದೊಂದು ಅಂಗದಲ್ಲೂ ಒಬ್ಬೊಬ್ಬ ಶರಣರನ್ನು ಮೂರ್ತಗೊಂಡಂತೆ ಭಾವಿಸುತ್ತಾನೆ. "ಬಸವಣ್ಣ ಆಚಾರಲಿಂಗವಾಗಿ ನಾಸಿಕದಲ್ಲಿ ಮೂರ್ತಗೊಂಡರೆ ಚನ್ನಬಸವಣ್ಣ ನಾಲಿಗೆಯಲ್ಲಿ ಗುರುಲಿಂಗವಾಗಿದ್ದಾನೆ. ಗಟ್ಟಿವಾಳಯ್ಯ ನಯನದಲ್ಲಿ ಶಿವಲಿಂಗವಾದರೆ, ಸಿದ್ಧರಾಮ ತ್ವಚೆಯಲ್ಲಿ ಜಂಗಮ ಲಿಂಗವಾಗಿದ್ದಾನೆ, ಪ್ರಭುದೇವರು ಕರ್ಣದಲ್ಲಿ ಪ್ರಸಾದ ಲಿಂಗವಾದರೆ, ಪ್ರಮಥರೆಲ್ಲಾ ಸರ್ವಾಂಗದಲ್ಲಿ ಏನುಗೊಂಡಿದ್ದಾರೆ. ಆದ್ದರಿಂದ ನಾನು ಸುಖಿಯಾಗಿದ್ದೇನೆ ಎಂದು ಹೆಮ್ಮೆಯಿಂದ ಹೇಳುತ್ತಾನೆ.

"ಎನ್ನ ಭಕ್ತಿ ಬಸವಣ್ಣನಲಿ ಬಯಲಾಯಿತ್ತು
ಎನ್ನ ಜ್ಞಾನ ಚನ್ನಬಸವಣ್ಣನಲಿ ಬಯಲಾಯಿತ್ತು
ಎನ್ನ ವೈರಾಗ್ಯ ಪ್ರಭುದೇವರಲ್ಲಿ ಬಯಲಾಯಿತ್ತು
ಇಂತೀ ಮೂವರು ಒಬ್ಬರೊಂದು ಬಯಲು ಮಾಡಿದರಾಗಿ
ಗೌರವೇಶ್ವರ ಲಿಂಗದಲಿ ನಿಶ್ಚಿಂತವಾಗಿತ್ತು'

ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರ ಸಂಗದಿಂದ ಲಿಂಗಜ್ಞಾನಿಯಾಗಿ ನಿಜದ ನಿಲುವ ಮುಟ್ಟಿದೆ ಎಂಬ ಈ ವಚನದಿಂದ ವ್ಯಕ್ತವಾಗುತ್ತದೆ.

ಬಸವಣ್ಣ ಅಂತರಂಗ ಬಹಿರಂಗದಲ್ಲಿ ಬೆಳಗಿ ಪಾವನ ಮಾಡಿದ ಗುರು ಎಂದು ನೆನೆಯುತ್ತಾನೆ. ಅಡಿಗಡಿಗೆ ಪ್ರಭುದೇವರನ್ನು ನೆನೆಯುತ್ತಾನೆ. "ಚಿತ್ತಕ್ಕೆ ಆಚಾರ ಲಿಂಗ ಬುದ್ಧಿಗೆ ಗುರುಲಿಂಗ, ಅಹಂಕಾರಕ್ಕೆ ಶಿವಲಿಂಗ, ಮನಕ್ಕೆಜಂಗಮಲಿಂಗ ಜ್ಞಾನಕ್ಕೆ ಪ್ರಸಾದಲಿಂಗ, ಭಾವಕ್ಕೆ ಮಹಾಲಿಂಗ, ಸ್ಥೂಲತನುವಿಗೆ ಇಷ್ಟಲಿಂಗ, ಸೂಕ್ಷ್ಮತನುವಿಗೆ ಪ್ರಾಣಲಿಂಗ, ಕಾರಣ ತನುವಿಗೆ ಭಾವಲಿಂಗವಾದಾತ ಬಸವಣ್ಣ "ಎಂದು ಅಡಿಗಡಿಗೂ ನೆನೆಯುತ್ತಾನೆ.

'ಅರಿವೇ ಗುರು', 'ಅರಿದಡೆ ಶರಣ, ಮರೆತಡೆ ಮಾನವ ಎಂಬ ತತ್ತ್ವ ಈ ವಚನದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

"ಅರಿವಿನ ಕುಳವನರಿಯೆ
ಮರಹಿನ ತೆರವನರಿಯೆ
ಅರಿವು ಮರಹಳಿದ ಗೌರವೇಶ್ವರ ಲಿಂಗಕ್ಕೆ
ಅರಿವೇ ಅರ್ಪಿತ
ಮರನೇ ಅನರ್ಪಿತ
ಮಾರನ ಹೆಣವ ನಾನೆತ್ತಬಲ್ಲೆನಯ್ಯಾ"

ಇಷ್ಟಾದರೂ ಆತನಲ್ಲಿ ನಾನತ್ವವಿಲ್ಲ, ಗರ್ವವಿಲ್ಲ, ಇನ್ನೂ ತಿಳಿಯಬೇಕೆಂಬ ಜ್ಞಾನ ದಾಹವಿದೆ. ಇವೆಲ್ಲಾ ಅನುಭಾವಿ ಮೇದಾರ ಕೇತಯ್ಯನ ಆತ್ಮ ಮಥನದಿಂದ ಹೊರ ಹೊಮ್ಮಿದ ಸಾಹಿತ್ಯ. ಇದರಲ್ಲಿ ನೀತಿ, ತತ್ತ್ವ, ಕಾವ್ಯ, ಶರಣ ಸಿದ್ಧಾಂತಗಳ ಸಂಗಮ-ವನ್ನು ಕಾಣಬಹುದು. ಈತ ಕಾಯಕತತ್ವದ ವಿಜಯಪತಾಕೆಯನ್ನು ಎತ್ತಿ ಹಿಡಿದ ಮಹಾ ದಾಸೋಹಿ,

ಒಂದು ಬಿದಿರಿಗೆ ಮೂರು ಕವೆ
ಈ ಕವೆಯೊಳಗೆ ಲಕ್ಷ ಸಿಬಿರು
"ಮೂರು ಕವೆಯ ಕೊಚ್ಚಿ ಸಿಬಿರ ಸಿಕ್ಕಿ ಬಿಡಿಸಿ.................
.............................................................................

ಈ ವಚನದಲ್ಲಿ ಏಕದೇವೋಪಾಸನೆಯ ಲಿಂಗಾಂಗ ಸಾಮರಸ್ಯದ ಶಿವಯೋಗ ಸಾಧನೆಯ ತಂತ್ರವು ಬಿಚ್ಚಿಕೊಳ್ಳುವುದು ಒಂದೇ ಜನ್ಮದಲ್ಲಿ ಮುಕ್ತದಾರಿ ತೋರಿಸುತ್ತದೆ. ತನ್ನ ಕಾಯಕದ ಬಗೆಗೆ ಈ ವಚನದಲ್ಲಿ ಸಮರ್ಥಿಸಿಕೊಳ್ಳುತ್ತಾನೆ.

ಲಿಂಗದೀಕ್ಷೆಯಿಂದ ಪರಿಶುದ್ಧವಾಗಿ, ಪಂಚಾಕ್ಷರಿ ಮಂತ್ರದಿಂದ ಪವಿತ್ರವಾಗಿ, ಹುಟ್ಟುಗೆಟ್ಟ ವಿಚಾರವನ್ನು ತಿಳಿಸುತ್ತದೆ. ಬಿದಿರು, ಕವೆ, ಮುಂತಾದುವುಗಳು ಅವನ ವೃತ್ತಿಯ ಚಿತ್ರವನ್ನು ಕಣ್ಣಿಗೆ ಕಟ್ಟಿದಂತೆ ಮಾಡುವುದು. ತನ್ನ ಬದುಕನ್ನೆ ಬರಹದಲ್ಲಿ

ಅಚ್ಚೊಳಿಸಿದ್ದಾನೆ. ಆತನ ವ್ಯಕ್ತಿತ್ವವೂ ಆತನ ವಚನಗಳಲ್ಲಿ ಪ್ರತಿಬಿಂಬಿಸುತ್ತವೆ. ನಯ, ವಿನಯ, ಭಕ್ತಿ ಮೈಗೂಡಿಕೊಂಡಿದ್ದಾ ದಯೆ, ದಾನ, ಧರ್ಮಗಳ ತ್ರಿವೇಣಿಸಂಗಮವನ್ನು ಆತನಲ್ಲಿ ಕಾಣಬಹುದು ಗುರು-ಲಿಂಗ-ಜಂಗಮ ಪ್ರೀತಿಯ ಸಂಗಮವನ್ನು ಆತನ ವಚನಗಳಲ್ಲಿ ತಿಳಿಯಬಹುದು.

ಅನುಭಾವಿ ಮೇದಾರ ಕೇತಯ್ಯ ತಾನು ಕೈಕೊಂಡ ಕಾಯಕ ಪರಿಕರಗಳನ್ನು ಬಳಸಿಕೊಂಡು ಲಿಂಗಾಂಗ ಸಾಮರಸ್ಯ ತತ್ತ್ವವನ್ನು ವಿವರಿಸುತ್ತಾನೆ. 'ಗುರು ಹುಸಿಲಿಂಗ ದಿಟವೆನ್ನಬಹುದೇ?' ಎಂಬ ವಚನ ಅಷ್ಟಾವರಣದ ಮಹತ್ವವನ್ನು ವಿವರಿಸುತ್ತದೆ. ಈ ವಚನ ಮೇದಾರಕೇತಯ್ಯನ ವೈಚಾರಿಕತೆಗೆ ನಿದರ್ಶನವಾಗಿದೆ. ಶರಣರು ನುಡಿದಂತೆ ನಡೆದವರು ಎಂಬುದಕ್ಕೆ ಮೇದಾರಕೇತಯ್ಯನ ಜೀವನವು ಸಾಕ್ಷಿ. ಕರುಣೆ, ದಯೆ, ದಾನ, ಧರ್ಮಗಳಲ್ಲಿ ಈತ ಎತ್ತಿದ ಕೈ. ಒಂದೊಂದು ವಚನವೂ ಶರಣರ ಸಿದ್ಧಾಂತವನ್ನು ಪ್ರತಿಪಾದಿಸುತ್ತಿವೆ. ಅಷ್ಟಾವರಣ, ಕಾಯಕ ತತ್ತ್ವ, ಏಕದೇವೋಪಾಸನೆ, ಭಕ್ತಿ, ದಾಸೋಹ, ಕರುಣೆ, ದಯೆ, ದಾನ, ಧರ್ಮಗಳನ್ನೊಳಗೊಂಡ ವಚನಗಳು ಶರಣ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತವೆ.

---

## ಸಹನೆ

ಎಂ. ಕೆ. ಭಾಶಿಂಗಿ, ಭೂ. ಸಾ. ಸಂ. ಕಾರ್ಯಾಲಯ, ಕೃಷಿ ಇಲಾಖೆ ೦ ಅಥಣಿ

ಸಹನೆವೆಂಬುದು ವಿಜಯದ ಹೆಗ್ಗುರುತು ಕಾಣಾ
ಬಹು ಜನಗಳಲ್ಲಿದು ಅತಿ ವಿರಳ ಕೂಡಾ
ಕಹಿ ಕಹಿಯ ಕಷಾಯ ನೀಡಿ ಕೊನೆಗೆ
ಸಿಹಿ ಸಂತೋಷದ ರಸಪಾಕ ದೇವಾ.

ಮರೆಯದಿರು ಮಹಾತ್ಮರನು ಲೋಕದೊಳ್
ತೆರೆದು ನೋಡವರ ದಿವ್ಯಚರಿತೆಯನು
ಬರಿ ಆಡಂಬರವಲ್ಲವರ ಬಾಳು ಸಹನೆಯ
ಕುರುಹು ನೋಡು ದೇವಾ

ಗಂಭೀರವಾಗಿಹನು ಗಜದಂತೆ ಸಹನಿಗನು
ತುಂಬು ಫಲಗಳ ಹೊಂದಿದ ಅಚಲ ವೃಕ್ಷ
ರಂಬೆಗಳ ಮುರಿದು ಕಲ್ಲುಗಳ ಹೊಡೆದರೂ
ಅಂದಾದ ನೆರಳು ಕೊಟ್ಟ ಮರದಂತೆ ದೇವಾ.

## ॥ ಚಿನ್ನದಈನುಡಿ ॥

ಜಿ.ಬಿ. ಲಿಂಗರಾಜು, ಜ್ಯೋತಿಮಲ್ಲಾಪುರ

ಕನ್ನಡ ನಾಡಿನ ಚಿನ್ನದ ಈನುಡಿ
ನಲಿಯುತ ನೀನುಡಿ ಕನ್ನಡಿಗ!
ಕನ್ನಡ ಮಾತೆಯ ಹೊನ್ನಿನ ಈಗುಡಿ
ಹೊಳೆಯುತ ಬೆಳಗಲಿ ಕನ್ನಡವ

ಕನ್ನಡ ಕೋಟೆಯ ನಲ್ಮೆಯ ತಾಯ್ನುಡಿ
ಮೊಳಗುತ ಗಳಿಸಲಿ ಕೀರ್ತಿಯನು
ಕನ್ನಡ ಕಹಳೆಯ ಧ್ವನಿಯೊಡಗೂಡಿ
ಬೆಳಗುತ ತಳೆಯಲಿ ಸ್ಫೂರ್ತಿಯನು.

ಕಣ್ಮನ ತಣಿಸುವ ಕಲೆಗಳ ಈಗುಡಿ
ಕಾವ್ಯದ ವೈಶಿರಿ ಕರುನಾಡು,
ಕರ್ನಾಟಕವೀ ಮಲೆನಾಡಿನ ಮುಡಿ
ನಾಟ್ಯ ಸರಸ್ವತಿಯ ನಲೆವೀಡು.

ಕನ್ನಡ ಹಣತೆಯ ಕಿರಣವು ಮೂಡಿ
ಶಕ್ತಿಯ ನೀಯಲಿ ಸಿರಿಗನ್ನಡಕೆ,
ಹೊಯ್ಸಳ ಶಿಲ್ಪವು ನಲಿದಿಹ ನಾಡಿ
ಮುಕ್ತಿಯನೀಯಲಿ ಸವಿಗನ್ನಡಕೆ,

ಕನ್ನಡ ಮಮತೆಯ ಗೀತೆಯ ಹಾಡಿ
ಜಯಧ್ವನಿಯಂತೆ ಉಚ್ಚರಿಸಿ,
ಕನ್ನಡ ಧ್ವಜವನು ಹಾರಿಸಿ ನೋಡಿ
ಕನ್ನಡ ನುಡಿಯನು ಉದ್ಧರಿಸಿ.

# ಮಾನಸಿಕ ಶಕ್ತಿಗಳು

ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ, ಶ್ರೀ ಗಾಯತ್ರಿ ಉಚಿತ ಆಯುರ್ವೇದ ಚಿಕಿತ್ಸಾಲಯ,
ಗೋಕುಲ, ಹುಬ್ಬಳ್ಳಿ–580 030.

## ಮಾನವನು ಕಾಂತತ್ವವನ್ನು ಬೆಳೆಯಿಸುವುದು ಹೇಗೆ?

ವ್ಯಕ್ತಿಗತವಾಗಿ ತನ್ನ ಕಾಂತ ಶಕ್ತಿಯನ್ನು ಬೆಳೆಯಿಸುವುದು ತೀರಾಸುಲಭ. ಕೊಟ್ಟ ಸೂಚನೆಗಳನ್ನು ಅನುಸರಿಸಿ, ಕೆಲವುದಿನ ಸತತ ಅಭ್ಯಾಸವನ್ನು ಮಾಡಿದಾಗ ಸಾಮಾನ್ಯ ಮನುಷ್ಯನೊಬ್ಬನು ಕೂಡಾ ಯಶಸ್ವಿಯಾಗಿ ಈ ಶಕ್ತಿಯನ್ನು ಬೆಳೆಯಿಸ ಬಹುದು. ಈ ಶಕ್ತಿಯು ಏಳ್ಗೆ ಮತ್ತು ಕುಗ್ಗುವಿಕೆ ಅವನ ಮನೋಧರ್ಮದ ಮೇಲೆ ಅವಲಂಬಿಸಿದೆ. ಉತ್ತಮ ಚಾರಿತ್ರ್ಯ ಉಳ್ಳ ಒಬ್ಬಮನುಷ್ಯ ಬೇಕಾದಷ್ಟು ವೈಯ್ಯಕ್ತಿಕ ಕಾಂತಶಕ್ತಿಯನ್ನು ಬೀರಬಲ್ಲ. ಅವರು ಎಲ್ಲಿ ಹೋದರೂ ಇತರರು ಒಳ್ಳೆವಿಶ್ವಾಸದಿಂದ ಅವನನ್ನು ಸ್ವಾಗತಿಸುತ್ತಾರೆ. ಮನುಷ್ಯನಲ್ಲಿ ಸದ್ಗುಣ ಮತ್ತು ದುರ್ಗುಣಗಳೆರಡೂ ಇವೆ. ಅವನಲ್ಲಿ ಸದ್ಗುಣಗಳೇ ಹೆಚ್ಚಾದರೆ ಅವನು ಬೀರುವ ಕಾಂತಶಕ್ತಿಯು ದೂರದ ವರೆಗೆ ಹರಿಯುತ್ತದೆ.

ಚಿಂತೆ ಎಂಬುದು ವೈಯಕ್ತಿಕ-ಕಾಂತಶಕ್ತಿಗೆ ಪರಮ ವೈರಿಯಾಗಿದೆ. ಚಿಂತೆಯು ದೇಹದ ಮತ್ತು ಮನಸ್ಸಿನ ಎಲ್ಲ ಮಹತ್ವದ ಶಕ್ತಿಗಳನ್ನು ಅಳಿಸಿ ಹಾಕುತ್ತಿದೆ. ಅತಿಯಾಗಿ ಚಿಂತೆ ಮಾಡುವುದರಿಂದ ಯಾವ ಕಾರ್ಯಗಳ ಸಾಧನೆಯೂ ಆಗದು. ಪ್ರಸನ್ನ ಚಿತ್ತವು ಕಾಂತ ಶಕ್ತಿಯನ್ನು ಬೆಳೆಯಿಸುವುದಲ್ಲಿಯೇ ಅದನ್ನು ಬಲಪಡಿಸುತ್ತದೆ. ಈ ಶಕ್ತಿಯನ್ನು ಬೆಳೆಯಿಸಲು, ಸ್ವಾಭಾವಿಕವಾದ ಕೆಲ ವಿಧಾನಗಳಿಗೆ ಅಲ್ಲದೆ ಅದನ್ನು ಪ್ರಯತ್ನ ಪೂರ್ವಕವಾಗಿಯೂ ಈ ವೈಯ್ಯುಕ್ತಿಕ ಕಾಂತ ಶಕ್ತಿಯನ್ನು ಆಶ್ಚರ್ಯಕರವಾದ ರೀತಿಯಲ್ಲಿ ಬೆಳೆಯಿಸಬಹುದು.

೧ ಈ ಶಕ್ತಿಯನ್ನು ಆಹಾರದೊಳಗಿಂದ ಗ್ರಹಿಸಬಹುದು.

೨ ಈ ಶಕ್ತಿಯನ್ನು ವಾತಾವರಣದಿಂದ ಪುಪ್ಪಸಗಳ ಮೂಲಕ ಈ ಕ್ರಿಯೆಯನ್ನು ಬೆಳೆಯಿಸಬಹುದು.

೩ ಇದನ್ನು ಸುಪ್ರಸನ್ನ ಮನಸ್ಸಿನಿಂದ ಬೆಳೆಸಬಹುದು.

ಜಾಗ್ರತ ಮನಸ್ಸನ್ನು ಸುಪ್ರಸನ್ನ ಮನಸ್ಸನ್ನು ಪ್ರಚೋದನಗೊಳಿಸುತ್ತದೆ. ಜಾಗ್ರತ ಮನಸ್ಸನ್ನು ಹೆಚ್ಚು ಚುರುಕಾಗಿ ಮತ್ತು ಲಾಭದಾಯಕವಾಗಿ ಮಾಡಬಹುದು. ಜಾಗ್ರತ ಮನಸ್ಸನ್ನು ಬಯಸಿದ ಬಯಕೆಗಳನ್ನೆಲ್ಲ ಸುಪ್ರಮನಸ್ಸು ನನಸಾಗಿ ಮಾಡುತ್ತದೆ.. ಈ ಪ್ರಕಾರವಾಗಿ ಅವೆರಡೂ ಸಂಬಂಧಿತವಾಗಿದೆ. ನಾನು ಹೆಚ್ಚು ಹೆಚ್ಚು ವೈಯುಕ್ತಿಕ ಹೆಚ್ಚು ಕಾಂತತ್ವವನ್ನು ಬೆಳೆಸುತ್ತ ಹೋದರೆ ನಮ್ಮಿರವು ಗೊತ್ತಾಗುತ್ತ ಹೋಗುವದು ಎಂಬ ಮಾತು ನಿಜವಿರುತ್ತದೆ. ವೈಯ್ಯಕ್ತಿಕ ಕಾಂತತ್ವವನ್ನು ಆತ್ಮಸತ್

ಮಾಡಿಕೊಳ್ಳಲು (ಅಡಗಿಸಿಕೊಳ್ಳಲು) ಕಲ್ಪನಾಶಕ್ತಿ ಬೇಕು. ಇದೇ ಇದರ ತೀರಾ ಸರಳವಾದ ರಹಸ್ಯ. ಒಟ್ಟಾರೆ ನಾವು ಹೆಚ್ಚು ಹೆಚ್ಚು ವಿಚಾರ ಮಾಡಿದಂತೆ ಕಲ್ಪನೆ ಮಾಡಿದಂತೆ ಈ ವಿಶ್ವದಲ್ಲಿ ಕಾಂತ ಶಕ್ತಿಯನ್ನು ಸಮೃದ್ಧವಾಗಿ ಅರಗಿಸಿ ಕೊಳ್ಳುತ್ತೇವೆ. ಯಾವದೇ ಒಂದು ಕಲ್ಪನೆಯನ್ನು ಮನಸ್ಸಿನಲ್ಲಿ ರೂಪಿಸಿಕೊಂಡು ಅದರ ಬಗ್ಗೆ ಏಕಾಗ್ರ ಚಿತ್ತದಿಂದ ಚಿಂತನೆ ಮಾಡಿದರೆ ಮೊದಲು ಹತ್ತು ನಿಮಿಷಗಳವರೆಗೆ ಮನಸ್ಸನ್ನು ಸ್ಥಿರಗೊಳಿಸಬಹುದು. ಮುಂದೆ ಕ್ರಮೇಣ ದಿನಾಲು ಇಪ್ಪತ್ತು ನಿಮಿಷಗಳಿಂದ ಮುವತ್ತು ನಿಮಿಷಗಳವರೆಗೆ ಕೂಡಾ ಈ ಸ್ಥಿತಿಯನ್ನು ಸಾಧಿಸಬಹುದು. ಒಂದು ವಾರ ಈರೀತಿ ಕಳೆದ ಬಳಿಕ ನಮ್ಮ ದೇಹದಲ್ಲಿಯ ಸಾಮಾನ್ಯವಾದ ಈ ಕಾಂತಶಕ್ತಿಯ ತರಂಗಗಳನ್ನು ಅನುಭವಿಸಬಹುದು. ನೀರನ್ನು ಕುಡಿಯುವ ಕಾಲದಲ್ಲಿ ತಾನು ಕುಡಿಯುವ ನೀರಿನಿಂದ ಕಾಂತಶಕ್ತಿಯನ್ನು ಅರಗಿಸಿಕೊಳ್ಳುತ್ತಿದ್ದೇನೆ ಎಂಬ ಚಿಂತನೆಯನ್ನು ಕಲ್ಪನೆ ಮಾಡಬೇಕು ಇದೇರೀತಿಯಿಂದ ಆಹಾರ ವಾಯು ಸೇವನೆ ಈ ಪ್ರಸಂಗಗಳಲ್ಲಿಯೂ ಮಾಡಬಹುದು. ಈವಿಧಾನಗಳಿಗಿಂತಲೂ ಮಹತ್ವಪೂರ್ಣವಾದ ವಿಧಾನಗಳೇದರೆ ಶೂನ್ಯದ ಶಕ್ತಿಯನ್ನು ನಿಯಂತ್ರಿಸಬಹುದು. ಇದಕ್ಕೆ ಪ್ರಾಣಾಯಾಮವೆಂದು ಹೆಸರು. ಮಾನಸಿಕ ಶಕ್ತಿಗಳನ್ನು ಜಾಗ್ರತಗೊಳಿಸಲು ಪ್ರಾಣಾಯಾಮ ವಿಧಾನವು ಪ್ರಮುಖ ಸಾಧ್ಯವೆಂದು ಮನ್ನಣೆಯನ್ನು ಪಡೆದಿರುವುದು.

ಪ್ರಾಣಾಯಾಮ:- ಶ್ವಸನ ಕ್ರಿಯೆಯು ಮೂರು ಕ್ರಿಯೆಗಳನ್ನು ಒಳಗೊಂಡಿದೆ

1) ಶ್ವಸನ 2) ಧಾರಣ 3) ನಿಶ್ವಸನ

ಪ್ರಾಣಾಯಾಮದ ಅಭ್ಯಾಸಮಾಡುವಾಗ ಹೊಸದಾಗಿ ಅಭ್ಯಾಸಮಾಡುವವರು ಮೊದಮೊದಲು ಧಾರಣ ಕ್ರಿಯೆಯನ್ನು ಬಿಟ್ಟು ಬಿಡುವುದು. ಧಾರಣ ಕ್ರಿಯೆಯನ್ನು ಮಾಡುವಾಗ ಯಾವುದೇ ರೀತಿಯ ಅಸ್ವಸ್ಥತೆ ಅಥವಾ ಉಸಿರುಗಟ್ಟುವಿಕೆಯ ಅನುಭವ ವಾಗಬಾರದು. ಈ ಪ್ರಾಣಾಯಾಮದ ಅಭ್ಯಾಸವನ್ನು ದಿನದಲ್ಲಿ ನಾಲ್ಕುಸಲ ಮಾಡಬಹುದು. 1)ಮುಂಜಾವಿನಲ್ಲಿ 2)ನಡುಮಧ್ಯಾಹ್ನದಲ್ಲಿ 3)ಸಂಜೆಯಲ್ಲಿ 4)ಮಧ್ಯರಾತ್ರಿಗೆ ಪ್ರಾರಂಭದಲ್ಲಿ. ಮುಂಜಾನೆ ಸಂಜೆಗೆ ಎರಡುಸಲ ಅಭ್ಯಾಸ ಮಾಡಿದರೆಸಾಕು. ಅಲ್ಪಾಹಾರ ಅಥವಾ ಬರೀಹೊಟ್ಟೆ ಪ್ರಾಣಾಯಾಮಕ್ಕೆ ಅತ್ಯವಶ್ಯಕ. ಹೊಸಬರು ಸುಮಾರು 20ಸಲ ಪ್ರಾಣಾಯಾಮ ಅಭ್ಯಾಸವನ್ನು ಮಾಡಬೇಕು ಈ ಪ್ರಾಣಾಯಾಮವು ನಮ್ಮಲ್ಲಿಯ ಆಧ್ಯಾತ್ಮಿಕ ಶಕ್ತಿಯನ್ನು ಜಾಗ್ರತ ಗೊಳಿಸುತ್ತದೆ. (ಒಳಗೆ ಉಸಿರು ಶ್ವಸನ, ಧಾರಣ, ನಿಶ್ವಾಸ ಈಮೂರು ಕ್ರಿಯೆಗೆಸೇರಿಸಿ ನಡೆಸಿದರೆ ಒಂದು ಸರತಿಯಾದಂತೆ.)

ಇದು ಪುಪ್ಪಸಗಳ ಒಂದು ವ್ಯಾಯಾಮ ಪದ್ಧತಿ. ತೀರಾ ಹೆಚ್ಚುಸಲ ಪ್ರಾಣಾಯಾಮದ ಅಭ್ಯಾಸವು ಅಪಾಯಕರವಾಗಿದೆ. ಇಪ್ಪತ್ತುಸಲ ಪ್ರಾಣಾಯಾಮ ಮಾಡಿದಾಗ ಸಾಧಕನಿಗೆ ಇದರಲ್ಲಿಯ ಆಕ್ಷ್ಯವು ಹಾರಿಹೋಗುತ್ತದೆ. ಆದ್ದರಿಂದ ಇದನ್ನು 2 ಅಥವಾ 3ಸಲ ನಿಮಿಷಗಳವರೆಗೆ ಇದನ್ನು ಮಾಡಬೇಕು. ಕ್ರಮೇಣವಾಗಿ

ಒಂದೆರಡು ನಿಮಿಷಗಳವರೆಗೆ ಅವಧಿಯನ್ನು ಬೆಳೆಸಬಹುದು. ದಣುವಿಕೆ ಎನಿಸಿದಾಗ ಆ ಕೂಡಲೆ ಪ್ರಾಣಾಯಾಮದ ಅಭ್ಯಾಸವನ್ನು ನಿಲ್ಲಿಸಬೇಕು. ಉಸಿರನ್ನು ಒಳಗೆ ಎಳೆದುಕೊಳ್ಳುವಾಗ ನಿಧಾನವಾಗಿಯೂ ಗಾಢವಾಗಿಯೂ ಉಸಿರನ್ನು ಎಳೆಯಬೇಕು. ಪ್ರಾರಂಭದಲ್ಲಿ ತೀರ ಗಾಢವಾಗಿ ಎಳೆಯುವ ಪ್ರಯತ್ನ ಮಾಡಬಾರದು. ಒಳ್ಳೇ ಜೋರಿನ ಶ್ವಾಸದ ಕ್ರಿಯೆಯಿಂದ ಪುಪ್ಪುಸಗಳು ಮೃದುವಾಗಿಯೂ ಗಾಸಿಯಾಗಿಯೂ ಹೋಗುತ್ತದೆ. ಉಸಿರನ್ನು ಹೊರಗೆ ಬಿಡುವಾಗಲೂ ಸಾವಕಾಶವಾಗಿ ಬಿಡಬೇಕು. ಒಂದು ದಿನಕ್ಕೆ ಅನೇಕಸಲ ಕೆಲವೇ ನಿಮಿಷಗಳವರೆಗೆ ಅಭ್ಯಾಸ ಮಾಡಿದನಂತರ ಕ್ರಮೇಣ ದೀರ್ಘಕಾಲದವರೆಗೆ ಪ್ರಾಣಾಯಾಮವನ್ನು ಸಾಧಿಸಬೇಕು ಇದರಲ್ಲಿ ಯಾವ ಬದಲಾವಣೆಗಳೂ ಸಲ್ಲದು. ಬಹಳಷ್ಟು ಜಾಗ್ರತೆ ವಹಿಸಬೇಕು,

**ಪ್ರಾಣಾಯಾಮದ ವೇಳೆಗೆ ತಕ್ಕ ನಿಲವು:-** ಸ್ವಾಮಿ ವಿವೇಕಾನಂದರು ಈ ಕೆಳಗಿನ ಭಂಗಿಯನ್ನು ಮನ್ನಿಸಿದ್ದಾರೆ. ಕ್ರಮಸಂಖ್ಯೆ ೧ ನೀಟಾಗಿ ಕುಳಿತುಕೊಳ್ಳ ಬೇಕು. ೨ ದೇಹವನ್ನು ನೀಟಾಗಿಇರಿಸಬೇಕು ೩ ಕಶೇರುರಜ್ಜುವು ಬೆನ್ನು ಮಣಿಗಳ ಒಳಭಾಗದಲ್ಲಿ ಇದ್ದರೂ ಕೂಡಾ ಅದಕ್ಕೆ ಹೊಂದಿಕೊಂಡಲ್ಲಿ ನೀವು ಬೆನ್ನುಮಣಿಸಿ ಕೂತರೆ ಕಶೇರು ರಜ್ಜುವಿಗೆ ತೊಂದರೆ ಕೊಡುತ್ತೀರಿ. ನೀಟಾಗಿ ಕುಳಿತರೆ ಈ ರಜ್ಜುವು ಸ್ವಸ್ಥವಾಗಿರುವದು. ದೇಹದ ಮೂರು ಭಾಗಗಳೆಂದರೆ ಎದೆ, ಕುತ್ತಿಗೆ, ಮತ್ತು ತಲೆ ಇವುಗಳು ಒಂದೇ ಸರಳರೇಖೆಯಲ್ಲಿ ಇರಬೇಕು. ೪ ಸುಖಾಸನದ ಭಂಗಿಯು ಬಹಳ ಅನುಕೂಲವೆಂದು, ಹೇಳಲಾಗಿದೆ. ಅದುಸುಲಭವೂ ಆಗಿದೆ. ದೇಹವು ಚಂಚಲವಾಗಿದ್ದರೆ ಮನಸ್ಸು ಕೂಡಾ ಚಂಚಲವಾಗುತ್ತದೆ. ದೇಹ ಮನಸ್ಸುಗಳಲ್ಲಿ ಅಷ್ಟೊಂದು ಘನಿಷ್ಟ ಸಂಬಂಧವಿದೆ. ಸುಖಾಸನವೆಂದರೆ ಊಟಕ್ಕೆ ಕುಳಿತಿರುವಾಗಿನ ಭಂಗಿ ಒಂದು ಚಾಪೆಯ ಮೇಲಾಗಿರಲಿ ಅಥವಾ ಹಾಸಿಗೆಯ ಮೇಲಾಗಿರಲಿ ಕೂಡ್ರುವದು ಒಳ್ಳೆಯ ಭಂಗಿ ಎನಿಸಿದೆ. ಮುಖವನ್ನು ಎದೆಯನ್ನು ಮೇಲೆನೂಡಿ ಕೈಕಾಲುಗಳನ್ನು ದೇಹದ ಜೊತೆಗೆ ನೀಟಾಗಿ ಚಾಚಿ ಮಲಗಬೇಕು. ಉಸಿರನ್ನು ಒಳಗೆ ಎಳೆಯುವಾಗ ಗದ್ದವನ್ನು ಎದೆಯ ಕಡೆಗೆ ಬಾಗಿಸಬೇಕು. ಯಾವದೇ ವ್ಯತ್ಯಯವಿಲ್ಲದೆ ಒಳ್ಳೇ ಗಾಳಿ ಬೀಸುವ ಮಲಗುವ ಕೋಣೆಯು ಈ ಅಭ್ಯಾಸಕ್ಕೆ ಯೋಗ್ಯಸ್ಥಾನ. ಈ ಅನುಕೂಲತೆಯಿಲ್ಲದಿದ್ದರೆ ಮನೆಯ ಹೊರಗೆ ಶಾಂತವಾದ ಸ್ಥಳವೊಂದನ್ನು ಆರಿಸಿಕೊಳ್ಳಬೇಕು. ಮುಂಜಾನೆ ನಿತ್ಯದ ಅಹ್ನಿಕಗಳನಂತರ ಪ್ರಾಣಾಯಾಮದ ಅಭ್ಯಾಸವನ್ನು ಮಾಡಬೇಕು. ಆವೇಳೆಗೆ ಹೊಟ್ಟೆ ಖಾಲಿ ಇದ್ದಷ್ಟು ಒಳ್ಳೆಯದು. ಅಭ್ಯಾಸ ಮಾಡುವವರು ಕಣ್ಣು ಮುಚ್ಚಬೇಕು. ನಿಮ್ಮ ಚಿತ್ತವನ್ನು ದೇಹದ ಹೊರಗೂ ಒಳಗೂ ಸರ್ವಾಂಗಣವಾಗಿ ಹರಿಸಬೇಕು. ಈ ಪ್ರಕಾರವಾಗಿ ನಿರಂತರವಾದ ಚಿತ್ತ ಸ್ಥೈರ್ಯವನ್ನು ಸಾಧಿಸಿದಾಗ ನಿಮ್ಮ ದೇಹದ ತುಂಬೆಲ್ಲ ಒಂದು ಪ್ರಕಾರದ ಸುಖಕರ ತರಂಗಗಳು ಅನುಭವಕ್ಕೆ ಬರುವುದು. ಒಂದು ಬಗೆಯ ಸುಖಕರ ತರಂಗಗಳು ನಿಮ್ಮ ದೇಹದಲ್ಲಿ ಹರಿದು ನಿಮ್ಮ ದೇಹದ ಎಲ್ಲ ಕ್ರಿಯೆಗಳನ್ನು ಬಲಗೊಳಿಸುತ್ತವೆ. ನೀವು ಯಾವ ಯಾವ ಭಾಗಕ್ಕೆ ಚಿತ್ತವನ್ನು ಹರಿಸುತ್ತೀರೋ ಆ ಭಾಗಕ್ಕೆ ಹೆಚ್ಚು ಹೆಚ್ಚು ರಕ್ತ ಸಂಚಾರವಾಗುತ್ತದೆ ಈ ಬಗೆಯ ಚಿತ್ತ ಸ್ಥಿರತೆ ಮೊದ ಮೊದಲು ಐದುನಿಮಿಷಗಳ ಅಭ್ಯಾಸದ ನಂತರ ದೇಹದಲ್ಲಿ ಸುಖ ಸಂಚಾರವನ್ನು ಅನುಭವಿಸಬಹುದು. ಇದು ಪ್ರಾಣಾಯಾಮದ ಮೊದಲನೆಯಹಂತ.

# ಮರಣಾನಂತರದ ವಿಚಿತ್ರ ಜಗತ್ತು

ಬಿ. ಸುಬ್ರಾಯ ಅಡಿಗ, ಸಂಡೂರು, 583119, ಬಳ್ಳಾರಿ ಜಿಲ್ಲೆ.

ಸಾವು ಭಯಂಕರ ಶಬ್ದವಷ್ಟೇ ಅಲ್ಲ ಬಿಡಿಸಲಾಗದ ಒಗಟೂ ಹೌದು. ಆದಿಕಾಲದಿಂದಾರಂಭಿಸಿ ಇಂದಿನ ಅತ್ಯಾಧುನಿಕ ಕಾಲದವರೆಗೂ ಮೃತ್ಯುವಿನ ರಹಸ್ಯವನ್ನು ಯಾರೂ ಅರಿಯದಾದರು. 'ಮೃತ್ಯು' ಹೇಗಿದೆಯೆಂಬುದನ್ನು ಮನುಷ್ಯನೆಂದೂ ಅರಿಯಲಾರ. ಏಕೆಂದರೆ ನಮಗದನ್ನು ಸ್ಪಷ್ಟವಾಗಿ ಹೇಳಲು ಯಾರೂ 'ಆ ಜಗತ್ತಿ'ನಿಂದ ಹಿಂದಿರುಗಿ ಬಂದಿಲ್ಲ -ಎಂದು ಜನ ಹೇಳುತ್ತಾರೆ

'ಭಾರತ'ದಲ್ಲಿ ಮೃತ್ಯುವಿನ ಬಗ್ಗೆ ಸಾಕಷ್ಟು ಹೇಳಲಾಗಿದೆ. ಹಳೆಯ ಬಟ್ಟೆ ಕಳಚು-ವಂತಿದೆ ಮೃತ್ಯುಎಂದು ಗೀತೆಯಲ್ಲಿ ಕೃಷ್ಣ ಸ್ಪಷ್ಟವಾಗಿ ಹೇಳಿದ್ದಾನೆ. ಆತ್ಮ ಮತ್ತೊಂದು ದೇಹವನ್ನು ಹುಡುಕಿ ಕೊಳ್ಳುತ್ತದೆ. ಆದರೆ ಇದೇನು ವ್ಯವಸ್ಥಿತವಾದ ಕ್ರಮವೇ ? ಈ ರಹಸ್ಯವನ್ನು ಸಿದ್ಧಪುರುಷರಷ್ಟೇ ಬಿಡಿಸಬಲ್ಲರು. ಆದರೆ ಅಂಥ ಮಹಾಮಹಿಮರೂ ಸಾರ್ವಜನಿಕವಾಗಿ ಈ ಕಗ್ಗಂಟನ್ನು ಬಿಡಿಸಿ ತೋರಿಸಿಲ್ಲ.

## ಜೀವನದಾಚೆ-ಸಂಗೀತಮಯ ಪ್ರಪಂಚ

ಪ್ರಾಚೀನ ಜ್ಞಾನವು ತಿಳಿಸುವ ವಿಷಯವನ್ನು ನಂಬುವುದೂ ಕಷ್ಟ. ಆದರೆ ಇಂದಿನ ಭೌತಿಕ ವಿಜ್ಞಾನ ಹಾಗೂ ಪರಾವಿಜ್ಞಾನವು ಆ ಹಳೆಯ ವಿವರಗಳನ್ನು ಪರೀಕ್ಷಿಸಿ ಹೊಸ ಅನುಭವದ ಬೆಳಕಿನಲ್ಲಿ ಇದರ ಅಧ್ಯಯನ ಆರಂಭಿಸಿದೆ. ಇಂದು ಮೃತ್ಯುಲೋಕದಿಂದ ಮರಳಿಬಂದ ಎಷ್ಟೋ ಜನ ನಮಗೆ ಕಾಣಸಿಗುತ್ತಾರೆ. ಇಂಥ ಹೆಚ್ಚಿನ ಜನರ ಅನುಭವಗಳಲ್ಲಿ 'ಸೂಕ್ಷ್ಮಶರೀರದ ಸಮಾನ ವಿವರಣೆಯಿದೆ. ಇವನ್ನೆಲ್ಲ ಪರಿಶೀಲಿಸುವಾಗ, ಮೃತ್ಯುವಿನ ಆಚೆಗಿನ ಜೀವನ ಬರೀ ಕಪೋಲಕಲ್ಪಿತವಲ್ಲ-ವಾಸ್ತ-ವಿಕವಾದುದು ಎಂಬ ಅಂಶ ಸ್ಪಷ್ಟವಾಗುತ್ತದೆ.

ಮರಣದ ಜಗತ್ತಿನಿಂದ ಹೊರಟು ಬಂದವರು ನೀಡಿದ ವಿವರದಲ್ಲಿ ಎಷ್ಟೋ ಅಂಶಗಳು ಸಮಾನವಾಗಿವೆ. ಒಂದು ಉದ್ದನೆಯ ಕತ್ತಲ ಸುರಂಗ, ಅದರಾಚೆ ತೀವ್ರಪ್ರಕಾಶ. ಅಲ್ಲಿ ಪರಿಚಿತ ಸಂಬಂಧಿಕರು ನಿಂತಿದ್ದಾರೆ. ದಿವ್ಯಮಂದಹಾಸದೊಂದಿಗೆ ಹೊಸಬನನ್ನು ಸ್ವಾಗತಿಸುತ್ತಾರೆ. ಇವನನ್ನು ವೇಗವಾಗಿ ನಿಲುವಂಗಿ ಧರಿಸಿದ ವ್ಯಕ್ತಿಯೊಂದು ಬೇರೆಡೆಗೆ ಒಯ್ಯುತ್ತದೆ. ಆ ಲೋಕದಲ್ಲಿ ಶಾಂತಿ, ಪ್ರಕಾಶ, ಅಲೌಕಿಕ ಸೌಂದರ್ಯ ಹಾಗೂ ಸಂಗೀತ ತುಂಬಿದೆ.

## ಮರಣದ ಅನುಭವಗಳು-ವಿಚಿತ್ರ ಸಾಮ್ಯ

ನಟಿ ಪ್ಯಾಟ್ ಫೋನಿಕ್ಸಳ ಪತಿ ಹೀಗೆಂದಿದ್ದಾನೆ-"ನನಗೆ ಸಾವಿನಿಂದ ಬದುಕಿಗೆ ಬಂದ ಅಪೂರ್ವ ಅನುಭವವಿದೆ. ಎಂತಲೇ ಕತ್ತಲ ಸುರಂಗಕ್ಕೆ ಸಂಬಂಧಿಸಿದ ಚಿತ್ರ-ವೊಂದನ್ನು ತಯಾರಿಸಿದ್ದೇನೆ! ಎಷ್ಟೋ ಜನರು ಮೃತ್ಯುವಿನಿಂದ ಹಿಂದಿರುಗಿದಂತಹ ತಮ್ಮ

ಅನುಭವಗಳನ್ನು ಉಲ್ಲೇಖಿಸಿದ್ದಾರೆ. ಅವರು ಬರೀ ವದಂತಿಯನ್ನು ನಂಬಿ ಹೀಗೆ ಹೇಳಿದ್ದಾರೆಂದು ಭಾವಿಸಲು ಕಾರಣವಿಲ್ಲ. ಏಕೆಂದರೆ ಹೆಚ್ಚಿನವರು ಪ್ರತಿಷ್ಠಿತರಿದ್ದು, ಅವರು ಸುಳ್ಳು ಹೇಳಿ ಏನೂ ಸಾಧಿಸಬೇಕಾಗಿಲ್ಲ.

"ಗಡಿ (ಜೀವನದಮೇರೆ)ಯಾಚೆ ಬಿಳಿಕಾಂತಿಯಿಂದ ಕೂಡಿದ ವಾತಾವರಣದಲ್ಲಿ ಕೆಲವು ನಿಲುವಂಗಿ ಧರಿಸಿದ ಆಕೃತಿಗಳು ಸಾಗುತ್ತಿವೆ"–ಎಂದು ಮಹಿಳೆಯೊಬ್ಬಳು ನುಡಿದಳು. ಈ ವಿವರಣೆ ಹಿಂದಿನ ಎಷ್ಟೋ ವಿವರಣೆಗಳಿಗೆ ಸಮವಾದುದು. ಹೀಗಾಗಿ ಮೃತ್ಯುಸಂಬಂಧೀಸಮಸ್ಯೆ ಬಹುಬೇಗನೆ ಬಿಡಿಸಲ್ಪಡಬಹುದು"–ಎಂದು ವಿಜ್ಞಾನಿಗಳು ಭಾವಿಸುತ್ತಿದ್ದಾರೆ.

ಇನ್ನೂ ಕೆಲ ಉದಾಹರಣೆನೋಡಿರಿ–ಬ್ರಿಟನಿನ ಗೃಹಸ್ಥಮಹಿಳೆ ಶ್ರೀಮತಿ ಕೆರೋಲ್ ಆದೊಂದುದಿನ ಸಿಜೇರಿಯನ್ ಆಪರೇಶನ್ ಬಳಿಕ, ಆಸ್ಪತ್ರೆಯಲ್ಲೇ ಮೃತಳೆಂದು ಘೋಷಿಸಲ್ಪಟ್ಟಳು. ಅವಳ ನಾಡೀಬಡಿತ 1?½ ನಿಮಿಷದವರೆಗೆ ನಿಂತು ಹೋಯಿತು. ಆದನ್ನು ಸ್ಪಂದಿಸುವಂತೆ ಮಾಡಲು ನಾಲ್ಕುಬಾರಿ ಕೃತಕ ಹವೆ ಕೊಡಲಾಯಿತು. ಅವಳು ಹೀಗೆನ್ನುತ್ತಾಳೆ "ನಾನು ನನ್ನ ದೇಹದಿಂದ ಹೊರಬಿದ್ದು ತೇಲ ತೊಡಗಿದೆ. ನನ್ನದೇಹ ಹಾಸಿಗೆಯ ಮೇಲೆ ಒರಗಿತ್ತು. ಕುರ್ಚಿಯ ಮೇಲೆ ನನ್ನ ತಂದೆ ಕುಳಿತು. ಹೋಗಬೇಡ ಮಗೂ ಧೈರ್ಯಗೆಡಬೇಡ ಇನ್ನೂ ಸ್ವಲ್ಪಹೋರಾಡು ಎನ್ನುತ್ತಿದ್ದರು. ನನಗೆ ಸೂಕ್ಷ್ಮ ದೇಹದಲ್ಲಿ ದಣಿವಾದಂತೆನಿಸಿತು. ಮತ್ತೆ ಅಲ್ಲಿ ಮುಸುಕಿದ ಮಂಜಿನೊಳಗೆ ಸೇರಿ ಹೋದೆ, ಆ ಬಳಿಕ ನನ್ನ ತಂದೆ ನನ್ನನ್ನು ಜೋರಾಗಿ ಅಲ್ಲಾಡಿಸುತ್ತಿದ್ದಾರೆ ಎಂಬುದಷ್ಟೇ ನೆನಪಿನಲ್ಲಿದೆ.

ಅಮೇರಿಕೆಯ ಮನೋರೋಗ ಚಿಕಿತ್ಸಕ ಡಾ. ಜಾರ್ಜ್ ರಿಚೀ ಹೀಗೆನ್ನುತ್ತಾರೆ. ೨೦ ವರ್ಷ ವಯಸ್ಸಿನಲ್ಲಿ ನಾನು ಒಮ್ಮೆ ಮೃತನಾದೆ. ನನ್ನನ್ನು ಬದುಕಿಸಲು ನಡೆಸಿದ ೯ ನಿಮಿಷಗಳ ಪ್ರಯತ್ನದಲ್ಲಿ ನನ್ನ ದೇಹದೊಳಗೆ ಇಂಜೆಕ್ಷನ್ ಮೂಲಕ ಔಷಧ ಹಾಕುತ್ತಿದ್ದರು, ಆ ಅವಧಿಯಲ್ಲಿ ನಾನು ನೂರಾರು ಮೈಲು ದೂರದ ಬೇರೊಂದು ನಗರದಲ್ಲಿ ಸೂಕ್ಷ್ಮ ರೂಪದಲ್ಲಿದ್ದೆ. ಒಂದು ವರ್ಷದ ಬಳಿಕ ವಾಸ್ತವವಾಗಿ ಆ ಅಪರಿಚಿತ ನಗರಕ್ಕೆ ಹೋದಾಗ, ನಾನು ಬೆರಗಾದೆ. ಏಕೆಂದರೆ ನಾನು ಸೂಕ್ಷ್ಮ ದೇಹದಲ್ಲಿ ಕಂಡಂತೆಯೇ ಇತ್ತದು !

ಬ್ರಿಟಿಷ್ ಚರ್ಚ್ ಅಧಿಕಾರಿ ಎಡ್ಮಂಡ್ ವಿಲಬೋರ್ನ್ ಆಸ್ಪತ್ರೆಯಲ್ಲಿ ಮೃತರೆಂದು ಘೋಷಿಸಲ್ಪಟ್ಟರು. ಅವರು ತಮ್ಮ ಅನುಭವವನ್ನು ಈ ರೀತಿ ಹೇಳುತ್ತಾರೆ. "ನನ್ನ ಆತ್ಮ ಹಾಗೂ ದೇಹವನ್ನು ಹೊಳೆಯುವ ಒಂದು ದಾರದಿಂದ ಬಿಗಿಯಲಾಗಿತ್ತು. ಅಕಸ್ಮಾತ್ ಆ ದಾರ ಬೇರ್ಪಟ್ಟಿತು. ನಾನು ಅಂತರಿಕ್ಷದಲ್ಲಿ ತೇಲುತ್ತಿದ್ದೆ. ನಾನು ಸ್ವರ್ಗದಂತಹ ಲೋಕಕ್ಕೆ ತಲುಪಿದೆ. ಅಲ್ಲಿ ಎಲ್ಲೆಡೆಯಲ್ಲೂ ಬೆಳಕೇ ಬೆಳಕು. ಅಲೌಕಿಕ ಶಾಂತಿ ಹಾಗೂ ಮಾಧುರ್ಯ ಅಲ್ಲಿ ತುಂಬಿತ್ತು. ಇಲ್ಲೇ ಪೂರ್ಣತೆಯಿದೆಯೆಂದು ನನಗನ್ನಿಸಿತು. ಆದರೆ ಆಗಲೇ.........." ಇವನು ಸಾಯದಿರಲಿ....ಇನ್ನೂ

ಸಾಕಷ್ಟು ಕೆಲಸ ಇವನಿಂದ ನಡೆಯಬೇಕಿದೆ. ಎಂದು ಕೇಳಿಸಿತು. ಇದು ನನ್ನ ಮನೆ ಮಾಲಕಿಯ ಧ್ವನಿ... ನಾನು ಮರಳಿ ಬಂದೆ .. ನನ್ನ ದೇಹ ಶವಾಗಾರದಲ್ಲಿ ಬಿದ್ದಿತ್ತು."

ಇಂಥ ಸಾವಿರಾರು ಪ್ರಕರಣಗಳನ್ನು ವಿಜ್ಞಾನಿಗಳು ಅಧ್ಯಯನ ಮಾಡುತ್ತಿದ್ದಾರೆ. ಭಾರತೀಯ ಮನೀಷಿಗಳ ಹೇಳಿಕೆ. ಈ ಹಿಂದೆ ಕಪೋಲ ಕಲ್ಪಿತವೆಂದು ಭಾವಿಸಲಾಗುತ್ತಿತ್ತು. ಆದರೀಗ ಅದು ವಾಸ್ತವಿಕವೆಂದು ತೋರಿಬರುತ್ತಿದೆ. ಈ ಬಗ್ಗೆ ಅಮೇರಿಕೆಯ ಪರಾಮನೋವಿಜ್ಞಾನಿ ರಾಬರ್ಟ್ ಏಮೋನ್ರೋ ಹೀಗೆನ್ನುತ್ತಾನೆ. "ನಾನು ನನ್ನ ಮೃತ ಸಂಬಂಧಿಗಳಿರುವ ಮೃತ್ಯು ಲೋಕಕ್ಕೂ ಹೋಗಿಬಂದಿದ್ದೇನೆ. ಜೀವನದಾಚೆಯ ಆ ಲೋಕಕ್ಕೆ ನಾವು ಸತ್ತೇ ತಲುಪಬೇಕೆಂದೇನೂ ಇಲ್ಲ. ಒಂದಿಷ್ಟು ಅಭ್ಯಾಸಮಾಡಿ ನೀವು ನಿಮ್ಮ ಈ ದೇಹವನ್ನು ನಿಮ್ಮ ಕೋಣೆಯಲ್ಲೇ ಬಿಟ್ಟು ಆ ಲೋಕಕ್ಕೆ ಹೋಗಿ, ಮತ್ತೆ ಸುರಕ್ಷಿತವಾಗಿ ಮರಳಬಲ್ಲಿರಿ,' ತಮ್ಮ ಈ ಅಭ್ಯಾಸದಿಂದಾಗಿಯೇ ೨೦ ವರ್ಷದ ಮೋನ್ರೋ ಎಷ್ಟೋ ಸಲ ಆ ಲೋಕಕ್ಕೂ ಹೋಗಿ ಬಂದಿದ್ದಾರೆ. ಬದುಕಿನ ಹಲವು ವರ್ಷಗಳನ್ನು ಅವರು ಪರಾಜ್ಞಾನದ ಅಧ್ಯಯನದಲ್ಲೇ ಕಳೆದಿದ್ದಾರೆ. ಅವರು ತುಂಬ ಪ್ರತಿಷ್ಠಿತ ಹಾಗೂ ಆದರಣೀಯ ವ್ಯಕ್ತಿಯಿರುವುದರಿಂದ ಅವರ ಹೇಳಿಕೆಯ ಬಗ್ಗೆ ಸಂದೇಹಪಡಬೇಕಾಗಿಲ್ಲ. ಔಟ್ ಬಾಡೀ ಎಕ್ಸಪೀರಿಯನ್ಸ್" ಎಂಬ ತಮ್ಮ ಸಂಸ್ಥೆಯಲ್ಲಿ ಅವರು ಈ ವಿಷಯದ ಬಗ್ಗೆ ಶೋಧ ನಡೆಸುತ್ತಿದ್ದಾರೆ.

ತಮ್ಮ ಅನುಭವದ ಸತ್ಯತೆಯನ್ನು ಅವರು ಪರೀಕ್ಷಿಸಿ ನೋಡಿದ್ದಾರೆ. ಒಮ್ಮೆ ಅವರು ತಮ್ಮ ಮೃತ ಮಿತ್ರ ಡಾ. ರಿಚರ್ಡ್‌ಗೋರ್ಡನ್‌ನನ್ನು ಭೇಟಿಯಾಗ ಬಯಸಿದರು. ಆ ಮಿತ್ರ ಕ್ಯಾನ್ಸರ್‌ದಿಂದ ಸತ್ತಿದ್ದ. ಮೋನ್ರೋ ಕೊನೆಯಲ್ಲಿ ತಮ್ಮ ಸ್ಥೂಲ ದೇಹವನ್ನು ಬಿಟ್ಟು ಆ ಮತ್ತೊಂದು ಪ್ರಪಂಚಕ್ಕೆ ಹೋದರು. ಅಲ್ಲಿ ೨೨ ವರ್ಷದ ತರುಣನೊಬ್ಬ ಕುಳಿತಿದ್ದ. ನಾನೇ ಗೋರ್ಡನ್ ಎಂದನಾತ. ಮೋನ್ರೋಗೆ ನಂಬಿಕೆಯಾಗಲಿಲ್ಲ. 'ಮನೆಗೆ ಹೋಗಿ ನನ್ನ ೨೨ ವರ್ಷದ ಚಿತ್ರವನ್ನು ನೋಡು-' ಎಂದನಾತ. ಮೋನ್ರೋ ಈ ಜಗತ್ತಿಗೆ ಮರಳಿ, ಗೋರ್ಡನ್‌ಮನೆಗೆ ಹೋದರು. ಅಲ್ಲಿ ಅವನ ವಿಧವೆಯಿಂದ ಅಂತಹದೇ ಚಿತ್ರವೊಂದನ್ನು ಪಡೆದರು.

ಒಟ್ಟಾರೆ, ಮೋನ್ರೋರ ಬಳಿಯ ವಿವರಣೆಗಳು ನಮ್ಮ ಕಣ್ಣು ತೆರೆಯಿಸುತ್ತಿವೆ. ಈ ಎಲ್ಲ ಸಂಗತಿಗಳನ್ನು ಪರಿಶೀಲಿಸುವಾಗ ಮೃತ್ಯು ಲೋಕದಿಂದ ಮರಳಿ ಬಂದವರ ಹೇಳಿಕೆಗಳಲ್ಲಿ ಅದ್ಭುತ ಸಮಾನತೆಯಿದೆಯೆಂಬುದು ವ್ಯಕ್ತವಾಗುತ್ತದೆ. ಆ ಸ್ವರ್ಗೀಯ ಲೋಕಕ್ಕೆ ತೆರಳಿದ ಬಳಿಕ ಭೂಲೋಕಕ್ಕೆ ಮರಳುವ ಇಚ್ಛೆ ಯಾರಿಗೂ ಆಗುವುದಿಲ್ಲ. ಕತ್ತಲ ಗುಹೆಯಿಂದ ಪ್ರಕಾಶದತ್ತ ಸಾಗಿದ ಈ ಪ್ರವಾಸದ ಬಗ್ಗೆ ಹಲವಾರು ಶೋಧ ಕಾರ್ಯಗಳು ಈಗಲೂ ಜರಗುತ್ತಿವೆ. (ಹಿಂದಿಯಿಂದ)

## "ಸಿದ್ಧಗಂಗಾ" ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ.

1389 ಶ್ರೀ ಬಿ. ಎಸ್. ಪುಟ್ಟಸ್ವಾಮಿ, ಬಿ.ಇ., ನಂ. 38, 9ನೇ ಮೈನ್,
4ನೇ ಕ್ರಾಸ್' ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು-40.

1390 ಶ್ರೀ ಪಿ. ಎಸ್. ಮಲ್ಲಯ್ಯ
ನಂ. 66, 4ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10,

1391 ಶ್ರೀ ಎಂ. ಶಿವಣ್ಣ
ಬ್ಯಾಗಡದೇವನಹಳ್ಳಿ, ಮರನೂರು ಅಂಚೆ, ಬೆಂಗಳೂರು 542 104.

1392 ಶ್ರೀ ವಿ. ಎಂ. ತೆಗ್ಗಿ, ಸ್ಟಾಂಪ್‌ವೆಂಡರ್,
ಗುಳೇದಗುಡ್ಡ, ಬಾದಾಮಿ ತಾ||, ಬಿಜಾಪುರ-ಜಿಲ್ಲೆ.

1393 ಶ್ರೀ ಎಚ್. ಎಸ್. ಶಾಂತಮೂರ್ತಿ, ಸಿದ್ಧಗಂಗಾ ಟೈಲ್ಸ್,
ಪಾಂಡುರಂಗನಗರ, ತುಮಕೂರು-1.

1394 ಶ್ರೀ ಎಂ. ಡಿ. ಜಾಫರ್
ಮದೀನ ಎಲಕ್ಟ್ರಿಕಲ್, ಸಿರಾ, ತುಮಕೂರು-ಜಿಲ್ಲೆ,

1395 ಶ್ರೀ ಡಿ. ಆರ್. ಶಿವಪ್ರಕಾಶ್ S/o. ಡಿ. ರುದ್ರಯ್ಯ, ಮರ್ಚೆಂಟ್,
ದೇವರಾಯಪಟ್ಟಣ, ತುಮಕೂರು-4.

1396 ಎಸ್. ಶಾಂತಯ್ಯ, ಶಿಕ್ಷಕರು,
ಕಂಬಾಳು, ನೆಲಮಂಗಲ ತಾ||, ಬೆಂಗಳೂರು-ಜಿಲ್ಲೆ.

1397 ಜಿ. ಎನ್. ಗಂಗಾಧರ S/o. ಶ್ರೀ ನಂಜುಂಡಪ್ಪ,
ನಂ. 17/ಎ, ರಾಜಮಹಲ್ ವಿಲಾಸ್ ಎಕ್ಸ್‌ಟೆನ್ಷನ್, ಸದಾಶಿವನಗರ,
ಬೆಂಗಳೂರು-6.

1398 ಅಧ್ಯಕ್ಷರು / ಕಾರ್ಯದರ್ಶಿಗಳು,
ಅರಕೇರಿ ಆಧ್ಯಾತ್ಮ ನಿಲಯ, ಗಂಗಾವತಿ, ರಾಯಚೂರು-ಜಿಲ್ಲೆ.

1399 ಶ್ರೀ ಎಸ್. ಆರ್. ಪ್ರಭು S/o. ಎಸ್. ರೇವಣ್ಣ,
ಸಿದ್ಧೇಶ್ವರ ನಿಲಯ, ಬಿ.ಪಿ. ಆಟೋಮೊಬೈಲ್ಸ್ ಹತ್ತಿರ, ಬಿ.ಹೆಚ್. ರಸ್ತೆ,
ತುಮಕೂರು-2.

1400 ಶ್ರೀ ಬಿ ಎಸ್. ವಿಜಯದೇವ್,
ಸೋಮೇಶ್ವರ ಟ್ರಾನ್ಸ್‌ಪೋರ್ಟ್, ಗೋಣಿಪುರ, ಬೆಂಗಳೂರು-74.

1401 ಶ್ರೀ ಜಿ. ಬಿ. ಸದಾಶಿವಯ್ಯ, ಶಿಕ್ಷಕರು,
ಗೂಳ್ಯ, ದೊಡ್ಡಬಳ್ಳಾಪುರ ತಾ||, ಬೆಂಗಳೂರು-ಜಿಲ್ಲೆ

1402 ಶ್ರೀ ಜಿ. ಮಹದೇವಪ್ರಸಾದ್,
ನಂ. 89/2, 4ನೇ ಮೈನ್, ಗೋವಿಂದರಾಜನಗರ, ಬೆಂಗಳೂರು-40.

1403 ಶ್ರೀ ವಿ. ಸಿ. ಶಿವಕುಮಾರಸ್ವಾಮಿ, ಅಡ್ವೊಕೇಟ್,
ದೇವಗೆರೆ, ಬೆಂಗಳೂರು-74.

(ಮುಂದುವರಿಯುತ್ತದೆ.)

## ಕರ್ನಾಟಕ—ನನಸಾದ ಕನಸು
## ಆಶೋತ್ತರಗಳ ಸಾಧನೆಯಲ್ಲಿ ಶಿಖರಪ್ರಾಯ

ಕರ್ನಾಟಕ ಸದಾ ಉನ್ನತವಾದ ಆಕಾಂಕ್ಷೆ ಮಹೋನ್ನತ ಕನಸುಗಳು ಹಾಗೂ ಪರಿಪೂರ್ಣ ಸಾಧನೆಗಳ ತವರೂರು. ಕನ್ನಡಿಗರು ಬಹುಹಿಂದಿನಿಂದಲೂ ವಿಶಾಲ ಹೃದಯ ಹಾಗೂ ದೃಢ ಮನಸ್ಸಿನಿಂದ ಕರ್ನಾಟಕವನ್ನು ಭಾರತದ ಮುಕುಟ ಮಣಿಯನ್ನಾಗಿಸಲು ಶ್ರಮಿಸಿದರು ಈ ಅರ್ಥಪೂರ್ಣ ಸಂಪ್ರದಾಯವನ್ನು ಉಳಿಸಿಕೊಂಡು ಇನ್ನಷ್ಟು ಉತ್ತಮಗೊಳಿಸುವಲ್ಲಿ ಪ್ರಸ್ತುತ ಸರ್ಕಾರ ಮುಖ್ಯಮಂತ್ರಿ ಎಸ್. ಬಂಗಾರಪ್ಪನವರ ನೇತೃತ್ವದಲ್ಲಿ ರಾಜ್ಯದ ಜನತೆಯ ಬದ್ಧತೆ ಮತ್ತು ಬೆಂಬಲದಿಂದ ದೃಢವಾದ ಹೆಜ್ಜೆ ಇಟ್ಟಿದೆ.

**ಶ್ರೇಷ್ಠ ಪರಂಪರೆಯ ಪೋಷಣೆಗೆ ಲಲಿತಕಲಾ ವಿಶ್ವವಿದ್ಯಾಲಯ :**

ಮೈಸೂರಿನಲ್ಲಿ ಲಲಿತಕಲೆಗಳ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲು ಈಗಾಗಲೇ ನಿರ್ಧರಿಸಿದೆ, ಈ ವಿಶ್ವವಿದ್ಯಾಲಯವು ಜಾನಪದ, ಶಿಲ್ಪಕಲೆ, ಚಿತ್ರರಚನೆ ಸಂಗೀತ ಮುಂತಾದ ರಂಗಗಳಲ್ಲಿ ಆಸಕ್ತ ಕಲಾವಿದರಿಗೆ ಹೆಚ್ಚಿನ ಉತ್ತೇಜನ ಹಾಗೂ ಸೂಕ್ತ ತರಬೇತಿ ನೀಡಲಿದೆ.

**ಕನ್ನಡಭವನ**

ಕನ್ನಡಭಾಷೆ ಹಾಗೂ ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ಪ್ರತಿಷ್ಠಿತ ಕನ್ನಡ ಭವನದ ನಿರ್ಮಾಣಕ್ಕೆ ಸರ್ಕಾರ ಮಂಜೂರಾತಿ ನೀಡಿದೆ.

**ಕರ್ನಾಟಕ ದರ್ಶನ**

ಕರ್ನಾಟಕದ ಶ್ರೇಷ್ಠ ಪರಂಪರೆಯನ್ನು ಪ್ರತಿಬಿಂಬಿಸುವ ಪ್ರದರ್ಶನಾಂಗಣವನ್ನು ಬೆಂಗಳೂರು ನಗರ ಸಮೀಪ ಸ್ಥಾಪಿಸಲು ಉದ್ದೇಶಿಸಲಾಗಿದೆ. ಇಡೀ ಕರ್ನಾಟಕದ ಹಿರಿಮೆಯ ಕೇಂದ್ರಗಳ ಭವ್ಯ ಸ್ಮಾರಕಗಳ ಪರಿಚಯವನ್ನು ಒಂದೇ ಕಡೆ ಒದಗಿಸಲಿದೆ. ಇದರಿಂದ ಪ್ರವಾಸಿಗರಿಗೆ ಕರ್ನಾಟಕದ ಸಮಸ್ತ ಪರಿಚಯ ಒಂದೇಕಡೆ ವೀಕ್ಷಿಸಲು ಅನುವಾಗುವುದು.

**ಅಖಿಲಭಾರತ ಸಂಗೀತ ಪ್ರಶಸ್ತಿ**

ಕರ್ನಾಟಕ, ಹಿಂದೂಸ್ಥಾನಿ ಶಾಸ್ತ್ರೀಯ ಹಾಗೂ ಕರ್ನಾಟಕ ಸಂಗೀತವನ್ನು ಪೋಷಿಸುವಲ್ಲಿ ವಿಶಿಷ್ಟಸ್ಥಾನ ಹೊಂದಿದೆ. ಈಶ್ರೇಷ್ಠ ಸಂಪ್ರದಾಯವನ್ನು ಮುಂದುವರಿಸಲು ಅಖಿಲ ಭಾರತ ಸಂಗೀತ ಪ್ರಶಸ್ತಿಯನ್ನು ಸ್ಥಾಪಿಸಲು ಉದ್ದೇಶಿಸಿದೆ.

**ಸಂಗೀತ ಉತ್ಸವ :**

ಶ್ರೀ ಬಸವರಾಜ ರಾಜಗುರು, ಕುಮಾರ ಗಂಧರ್ವ, ಮಲ್ಲಿಕಾರ್ಜುನ ಮನ್ಸೂರ್ ಅವರ ಅಗಲಿಕೆಯಿಂದ ರಾಜ್ಯ ಮೂವರು ಶ್ರೇಷ್ಠ ಸಂಗೀತಗಾರರನ್ನು ಕಳೆದು-ಕೊಂಡಿದೆ. ಇವರನೆನಪಿನಲ್ಲಿ ಮೂರು ದಿನಗಳ ವಾರ್ಷಿಕ ಸಂಗೀತ ಉತ್ಸವವನ್ನು ಏರ್ಪಡಿಸಿ ಪ್ರತಿಭಾವಂತರನ್ನು ಆಹ್ವಾನಿಸುವ ಯೋಜನೆಯನ್ನು ಸರ್ಕಾರ ಹಮ್ಮಿಕೊಂಡಿದೆ

**ಜಾನಪದ ಕಲೆಗಳ ಅಭಿವೃದ್ಧಿ :**

ಕರ್ನಾಟಕ ವಿಶಿಷ್ಟ ಹಾಗೂ ರೋಮಾಂಚಕ ಜಾನಪದ ಕಲೆಗಳ ತವರೂರು ಲಲಿತ ಕಲೆಗಳ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಶಾಶ್ವತವಾಗಿ ಜಾನಪದ ಉತ್ಸವವನ್ನು ಏರ್ಪಡಿಸಲು ನಿರ್ಧರಿಸಲಾಗಿದೆ.

**ಕುವೆಂಪು ಹಾಗೂ ಬೇಂದ್ರೆ ಪ್ರತಿಷ್ಠಾನ :**

ಕರ್ನಾಟಕದ ಇಬ್ಬರು ಶ್ರೇಷ್ಠ ಲೇಖಕರ ಜನ್ಮ ಸ್ಥಳಗಳಲ್ಲಿ ಪ್ರತಿಷ್ಠಾನಗಳನ್ನು ಸರ್ಕಾರ ಸ್ಥಾಪಿಸಲಿದೆ. ವಿಶ್ವಾದ್ಯಂತ ಸಾಹಿತ್ಯ ಪ್ರೇಮಿಗಳು ಹಾಗೂ ವಿದ್ಯಾರ್ಥಿಗಳನ್ನು ಶ್ರೇಷ್ಠ ಹುಟ್ಟೂರುಗಳಿಗೆ ಆಕರ್ಷಿಸಿ ಅವರ ಸಾಧನೆಯನ್ನು ಸ್ಮರಿಸುವ ಉದ್ದೇಶ ಹೊಂದಿದೆ

**ಶ್ರೇಷ್ಠ ಗೌರವ :**

ಕರ್ನಾಟಕ ರತ್ನ ಪ್ರಾಯರಾದ ರಾಷ್ಟ್ರಕವಿ ಡಾ॥ ಕೆ. ವಿ. ಪುಟ್ಟಪ್ಪ ಹಾಗೂ ಕನ್ನಡ ನಾಟಕ ಮತ್ತು ಚಿತ್ರರಂಗದ ಪ್ರಸಿದ್ಧ ನಟ ಡಾ॥ ರಾಜ್‌ಕುಮಾರ್ ಅವರಿಗೆ ನವಂಬರ್ ಮಾಹೆಯಲ್ಲಿ ರಾಜ್ಯ ಸರ್ಕಾರ ಅತ್ಯಂತ ಶ್ರೇಷ್ಠ ಪುರಸ್ಕಾರ ನೀಡಿ, ಯೋಗ್ಯ ರೀತಿಯಲ್ಲಿ ಗೌರವಿಸಲಾಗುವುದು.

**ಸಂದೇಶ :**

ರಾಜ್ಯೋತ್ಸವದ ಶುಭ ದಿನದಂದು ಕರ್ನಾಟಕ ಸಮಸ್ತರಿಗೂ ಸುಖ ಸಂತೋಷಗಳನ್ನು ಆಶಿಸಲು ನನಗೆ ಅತ್ಯಂತ ಆನಂದವಾಗುತ್ತಿದೆ. ರಾಜ್ಯದ ಬಡವರ, ದುರ್ಬಲ ಹಾಗೂ ಹಿಂದುಳಿದ ವರ್ಗಗಳ ಏಳಿಗೆಗೆ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಗೊಳಿಸುವುದೇ ನಮ್ಮ ಸರ್ಕಾರದ ಪ್ರಥಮಾದ್ಯತೆ. ಇದನ್ನು ತಾವೆಲ್ಲರೂ ಬೆಂಬಲಿಸಿದ್ದೀರಿ. ಕರ್ನಾಟಕದ ಶ್ರೇಷ್ಠ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ ಬೆಳೆಸಲು ಹಮ್ಮಿಕೊಂಡಿದ್ದು, ಈದಿನದಂದು ತಮ್ಮೆಲ್ಲರ ಪ್ರೀತಿ ವಿಶ್ವಾಸಕ್ಕೆ ನಾನು ಧನ್ಯವಾದಗಳನ್ನು ಸಲ್ಲಿಸುತ್ತಾ ನಮ್ಮ ರಾಜ್ಯಕ್ಕೆ ಉತ್ತಮ ಭವಿಷ್ಯ ರೂಪಿಸುವಲ್ಲಿ ಮುಂದೆಯೂ ತಮ್ಮ ಪ್ರೀತಿ ಆದರ ಹಾಗೂ ಬೆಂಬಲವನ್ನು ನಿರೀಕ್ಷಿಸುತ್ತೇನೆ,

"ಜೈ ಕರ್ನಾಟಕ"

ಕರ್ನಾಟಕ ವಾರ್ತೆ